# TRAVEL PAGE

DUBAI - 5 Days



SINGAPORE MALAYSIA
THAILAND : 11 Days



SRILANKA - 7 Days



## Mt. Kailash & Manasa Sarovar Yatra

Sep 01, 15



### Highlights

| | | | | |
|---|---|---|---|---|
| Doctor / Nurse will accompany | Experience of over a decade | Most percentage of satisfied customers | Vegetarian Food | Homa & Pooja facilities at Manasa Sarovar |
| | Avail Rs. 30,000/- subsidy from Karnataka Govt. (Karnataka Citizens only) | Briefing Session at Bangalore | Bangalore Staff will accompany | Assistance in availing Travel Insurance |



## Shri Hansaa Travels

Recognised by Department of Tourism, Govt. of Karnataka


# 640, 40th Cross, 8th Block, Jayanagar, Bangalore - 70

☎ : 080-26543891 / 26643276 / 0-9341215612 / 9341415612

: hansaatravels@gmail.com : hansaatravels.com

ಸೆಪ್ಟೆಂಬರ್ 2014 ಸಂಪುಟ 15 ಸಂಚಿಕೆ 09

# ವಿವೇಕಪ್ರಭ























**ವ್ಯವಸ್ಥಾಪಕ ಸಂಪಾದಕರು**
ಸ್ವಾಮಿ ಮುಕ್ತಿದಾನಂದ

**ಸಂಪಾದಕರು**
ಸ್ವಾಮಿ ಜ್ಞಾನಯೋಗಾನಂದ

**ನೆರವು:**
ಆರ್. ಎಸ್. ಪೂರ್ಣಾನಂದ
ಎನ್. ಎಸ್. ಶಾರದಾಪ್ರಸಾದ್
ಡಾ. ಕೆ. ಎಲ್. ಪ್ರಸನ್ನಾಕ್ಷಿ
ಡಾ. ಎಚ್. ಪಾಂಡುರಂಗ ವಿಠಲ

**ಅಕ್ಷರ ಜೋಡಣೆ**
ಶ್ರೀರಾಮಕೃಷ್ಣ ಆಶ್ರಮ, ಮೈಸೂರು

**ಮುದ್ರಣ**
ಮಯೂರ್ ಗ್ರಾಫಿಕ್ಸ್, ಬೆಂಗಳೂರು



**E-mail:**
vivekaprabha@hotmail.com
kannada.vivekaprabha@gmail.com
**Website:** vivekaprabha.net
**ಫೋನ್ :** 9481533505


**ಮುಖಪುಟ:**
ಬಾನ ಬೆಳಗು
ಬಾಳ ಬೆಳಕು

**ಈ ಪತ್ರಿಕೆಯ ಧ್ಯೇಯ**

ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.
– ಸ್ವಾಮಿ ವಿವೇಕಾನಂದ

**ಚಂದಾ ವಿವರ :** ಬಿಡಿ ಪ್ರತಿ: ₹ 14; ವಾರ್ಷಿಕ: ₹ 140; ಮೂರು ವರ್ಷ: ₹ 375; ಆಜೀವ (25 ವರ್ಷ): ₹ 3,000; ಪೋಷಕ ಸಹಾಯಧನ: ₹ 5,000 ಅಥವಾ ಹೆಚ್ಚು. ವಿದೇಶಗಳಿಗೆ: (ಏರ್‌ಮೇಲ್): ವಾರ್ಷಿಕ: $20; ಮೂರು ವರ್ಷ: $60; ಆಜೀವ (25 ವರ್ಷ): $300; ಪೋಷಕ ಸಹಾಯಧನ: $600 ಅಥವಾ ಹೆಚ್ಚು.



ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.



# ಶ್ರೀರಾಮಕೃಷ್ಣ ಶಾರದಾಶ್ರಮ


ಪೊನ್ನಂಪೇಟೆ –571 216, ಕೊಡಗು ಜಿಲ್ಲೆ ಫೋನ್: 08274–249040

e-mail: srkseva@gmail.com • Web: www.rkmponnampet.org.


## ಆಧ್ಯಾತ್ಮಿಕ ಶಿಬಿರ : 9–10–2014 ರಿಂದ 11–10–2014

ಪೊನ್ನಂಪೇಟೆಯಲ್ಲಿ ನಿರ್ಮಾಣವಾಗಿರುವ ಶ್ರೀರಾಮಕೃಷ್ಣ ವಿಶ್ವಭಾವೈಕ್ಯ ಮಂದಿರದ 5ನೇ ವಾರ್ಷಿಕೋತ್ಸವದ ಪ್ರಯುಕ್ತ, **2014 ಅಕ್ಟೋಬರ್ 9 ರಿಂದ 11 ರವರೆಗೆ,** 3 ದಿನಗಳ ಆಧ್ಯಾತ್ಮಿಕ ಶಿಬಿರವನ್ನು ಅಯೋಜಿಸಲಾಗಿದೆ. ರಾಮಕೃಷ್ಣ ಮಠದ ಹಿರಿಯ ಯತಿಗಳಾದ ಸ್ವಾಮಿ ಜಗದಾತ್ಮಾನಂದಜಿ, ಸ್ವಾಮಿ ರಾಘವೇಶಾನಂದಜಿ, ಸ್ವಾಮಿ ಮುಕ್ತಿದಾನಂದಜಿ ಮತ್ತಿತರರು ಈ ಶಿಬಿರದಲ್ಲಿ ಭಕ್ತರಿಗೆ ಮಾರ್ಗದರ್ಶನ ನೀಡಲಿದ್ದಾರೆ ಮತ್ತು ನಾಡಿನ ಹಲವು ಖ್ಯಾತ ವಾಗ್ಮಿಗಳು ಪ್ರವಚನಗಳನ್ನು ನೀಡಲಿದ್ದಾರೆ. ಸಾಂಸ್ಕೃತಿಕ ಕಾರ್ಯಕ್ರಮಗಳೂ ಆಯೋಜಿತವಾಗಿವೆ.

**ಶಿಬಿರದ ನೋಂದಣಿ ಶುಲ್ಕ**

**ವಸತಿ ರಹಿತ: ರೂ. 600/– ವಸತಿ ಸಹಿತ: ರೂ. 1000/–**

**ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ : 2.10.2014**

(ಅರ್ಜಿಯಲ್ಲಿ ಹೆಸರು, ವಯಸ್ಸು, ವಿಳಾಸ ಮತ್ತು ದೂರವಾಣಿ ಸಂಖ್ಯೆಗಳನ್ನು ನೀಡಬೇಕು. ನಿಗದಿತ ಅರ್ಜಿಯನ್ನು ಆಶ್ರಮದ ವೆಬ್‌ಸೈಟಿನಿಂದ ಕೂಡ ಪಡೆಯಬಹುದಾಗಿದೆ.)

## ಕರ್ನಾಟಕದಲ್ಲಿ ನಡೆದ ವಿವೇಕಾನಂದ ರಥಯಾತ್ರೆಯ ಸಂಯೋಜಕರು ಮತ್ತು ಸ್ವಯಂಸೇವಕರ ದ್ವಿತೀಯ ಸಮ್ಮೇಳನ

**ದಿನಾಂಕ:** 8–10–014 **ಸಮಯ:** ಬೆಳಗ್ಗೆ 10 ರಿಂದ 4ರ ವರೆಗೆ

ಕರ್ನಾಟಕದಲ್ಲಿ ಅತ್ಯದ್ಭುತವಾಗಿ ವಿವೇಕಾನಂದ ರಥಯಾತ್ರೆ ನಡೆದಿರುವುದು ತಮಗೆಲ್ಲಾ ತಿಳಿದ ವಿಚಾರವಾಗಿದೆ. ಬೆಂಗಳೂರಿನ ಬಸವನಗುಡಿ ರಾಮಕೃಷ್ಣ ಮಠದಲ್ಲಿ ನಡೆದ ಮೊದಲ ಸಮ್ಮೇಳನದಲ್ಲಿ ತೀರ್ಮಾನಿಸಿದಂತೆ, ೨ನೇ ಸಮ್ಮೇಳನವನ್ನು ಪೊನ್ನಂಪೇಟೆಯ ಶ್ರೀರಾಮಕೃಷ್ಣ ಶಾರದಾಶ್ರಮದಲ್ಲಿ ರಥಯಾತ್ರೆಯ ರಾಜ್ಯ ಸಂಯೋಜಕರಾದ ಸ್ವಾಮಿ ತ್ಯಾಗೀಶ್ವರಾನಂದಜಿಯವರ ನೇತೃತ್ವದಲ್ಲಿ ನಡೆಸಲಾಗುವುದು. ಸಮ್ಮೇಳನದಲ್ಲಿ ಆಧ್ಯಾತ್ಮಿಕ ಪ್ರವಚನಗಳು, ವಿಚಾರ ಸಂಕಿರಣ, ಹಾಗೂ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಆಯೋಜಿಸಲಾಗಿದೆ.

ರಥಯಾತ್ರೆಯ ಎಲ್ಲಾ ಸಂಯೋಜಕರು ಮತ್ತು ಸ್ವಯಂಸೇವಕರು ಈ ಸಮ್ಮೇಳನದಲ್ಲಿ ಭಾಗವಹಿಸಬೇಕಾಗಿ ವಿನಂತಿ. ಮೇಲಿನ ಆಧ್ಯಾತ್ಮಿಕ ಶಿಬಿರದಲ್ಲಿ ಭಾಗವಹಿಸುವ ಶಿಬಿರಾರ್ಥಿಗಳೂ ಈ ಸಮ್ಮೇಳನದಲ್ಲಿ ಭಾಗವಹಿಸಬಹುದು. ಭಾಗವಹಿಸುವವರು ದಯವಿಟ್ಟು 2–10–2014ರೊಳಗೆ ಪತ್ರಮುಖೇನ ಅಥವಾ Email ಮುಖಾಂತರ ತಿಳಿಸಬೇಕಾಗಿ ವಿನಂತಿ.

ಈ ಒಂದು ದಿನದ ಸಮ್ಮೇಳನದಲ್ಲಿ ಭಾಗವಹಿಸಲು ಯಾವುದೇ ಶುಲ್ಕವಿರುವುದಿಲ್ಲ.

ಭಕ್ತಾದಿಗಳು ಈ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ದಿವ್ಯತ್ರಯರ ಕೃಪೆಗೆ ಪಾತ್ರರಾಗಬೇಕೆಂದು ಕೋರಲಾಗಿದೆ.

ಭಗವತ್ಸೇವೆಯಲ್ಲಿ ತಮ್ಮವ,

ಸ್ವಾಮಿ ಬೋಧಸ್ವರೂಪಾನಂದ
ಅಧ್ಯಕ್ಷರು

## ಪ್ರಾರ್ಥನೆ

# ಶ್ರೀ ಹನುಮದ್ಭುಜಂಗಪ್ರಯಾತಸ್ತೋತ್ರದಿಂದ

ಪ್ರಪನ್ನಾಗರಾಗಂ ಪ್ರಭಾಕಾಂಚನಾಂಗಂ
ಜಗದ್ಭೀತಿಶೌರ್ಯಂ ತುಷಾರಾದ್ರಿಧೈರ್ಯಮ್ ।
ತೃಣೀಭೂತಹೇತಿಂ ರಣೋದ್ಯದ್ವಿಭೂತಿಂ
ಭಜೇ ವಾಯುಪುತ್ರಂ ಪವಿತ್ರಾಪ್ತಮಿತ್ರಮ್ ॥

ಕಾಂತಿಯುಕ್ತನಾದ, ಶೂರನಾದ, ಧೀರನಾದ, ಅಗ್ನಿಜ್ವಾಲೆಯನ್ನು ಮೀರಿಸುವಂತಹ ವಾಯುಪುತ್ರನನ್ನು ಭಜಿಸುತ್ತೇನೆ.

ಭಜೇ ಪಾಮರಂ ಭಾವನೀನಿತ್ಯವಾಸಂ
ಭಜೇ ಬಾಲಭಾನುಪ್ರಭಾಚಾರುಹಾಸಮ್ ।
ಭಜೇ ಚಂದ್ರಿಕಾಕುಂದಮಂದಾರಹಾಸಂ
ಭಜೇ ಸಂತತಂ ರಾಮಭೂಪಾಲದಾಸಮ್ ॥

ಭಕ್ತರ ಮನಸ್ಸಿನಲ್ಲಿ ನಿತ್ಯ ನೆಲೆಸುವ, ಬಾಲಸೂರ್ಯನ ಕಿರಣದಂತೆ ಸುಂದರವಾದ ನಗುವುಳ್ಳ, ಬೆಳದಿಂಗಳು ಮಂದಾರದಂತಹ ನಗುವುಳ್ಳ, ಶ್ರೀರಾಮನ ದೂತನಾದ ಆಂಜನೇಯನನ್ನು ಸತತವೂ ಭಜಿಸುತ್ತೇನೆ.

ರಮಾನಾಥರಾಮ ಕ್ಷಮಾನಾಥರಾಮ
ಹೃಶೋಕೇ ಸಶೋಕಾಂ ವಿಹಾಯ ಪ್ರಮರ್ಷ ।
ವನಾತದ್ಘನಾನಾಂ ಜೀವನಂ ದಾನವಾನಾಂ
ವಿಪಾಟ್ಯ ಪ್ರಹರ್ಷಾತ್ ಹನೂತ್ತ್ವಮೇವ ॥

ಶ್ರೀರಾಮ ಅಶೋಕವನದಲ್ಲಿ ಸಶೋಕಳಾಗಿರುವ ಸೀತಾಮಾತೆಯ ದುಃಖವನ್ನು ಕಂಡು ಸಹಿಸಲಾರದೆ ದಾನವರನ್ನು ಸಂಹರಿಸಿದ ಮಹಾತ್ಮ ನೀನು.



ಮಹಾಯೋಗಿನೋ ಬ್ರಹ್ಮರುದ್ರಾದಯೋ ವಾ
ನ ಜಾನಂತಿ ತತ್ತ್ವಂ ನಿಜಂ ರಾಘವಸ್ಯ ।
ಕಥಂ ಜ್ಞಾಯತೇ ಹೀದೃಶೇ ನಿತ್ಯಮೇವ
ಪ್ರಸೀದ ಪ್ರಭೋ ವಾನರೇಂದ್ರೋ ನಮಸ್ತೇ ॥

ಮಹಾಯೋಗಿಗಳಾಗಲಿ, ಬ್ರಹ್ಮಾದಿದೇವತೆಗಳಾಗಲಿ, ಶ್ರೀರಾಮನ ಮಹತ್ವವನ್ನು ತಿಳಿದಿಲ್ಲ. ಹೀಗಿರುವಾಗ ನನ್ನಂತಹವನಿಗೆ ಹೇಗೆ ತಿಳಿದೀತು? ವಾನರೇಂದ್ರನೇ, ಪ್ರಸನ್ನನಾಗು.

## ಸೂಕ್ತಿಪ್ರಭ

ಮೊದಲನೆಯದೇ ಹೃದಯವಂತಿಕೆ. ಬುದ್ಧಿಯಲ್ಲಿ ಮತ್ತು ವಿಚಾರಶಕ್ತಿಯಲ್ಲಿ ಏನಿದೆ? ಕೆಲವು ಹೆಜ್ಜೆಗಳು ಹೋಗಿ ಅಲ್ಲಿ ನಿಲ್ಲುವುವು. ಸ್ಫೂರ್ತಿ ಬರುವುದು ಹೃದಯದಿಂದ. ಪ್ರೇಮವು ಅಸಾಧ್ಯವಾದ ಬಾಗಿಲನ್ನೂ ತೆರೆಯುವುದು. ಪ್ರಪಂಚದ ರಹಸ್ಯಕ್ಕೆಲ್ಲಾ ಪ್ರೇಮವೇ ಬಾಗಿಲು.

*–ಸ್ವಾಮಿ ವಿವೇಕಾನಂದ*

ನಿನ್ನ ಹೃದಯದಲ್ಲಿರುವ ಕಶ್ಮಲವನ್ನೆಲ್ಲ ತೆಗೆದುಹಾಕು. ದೀನನಾಗು. ಆಗ ನಿನಗೆ ಶತ್ರುಗಳೇ ಇರುವುದಿಲ್ಲ. ನಿನ್ನಂತಹ ಶಕ್ತನು ಬೇರೊಬ್ಬನು ಇರುವುದೂ ಇಲ್ಲ. ಅವಿನಾಶಿಯಾದ ಪ್ರೇಮವೆಂಬ ವಸ್ತುವೊಂದೇ ಜಗತ್ತಿನಲ್ಲಿ ನಿತ್ಯವಾದುದು.

*–ಜೇಮ್ಸ್ ಅಲೆನ್*

ಹೂ ನೀಡುವ ಕೈಗಳಿಗೂ ತುಸು ಸುಗಂಧ ತಗಲುವುದು.

*–ಚೀನೀ ಗಾದೆ*

ಕತ್ತಲೆಯು ಅಗ್ನಿಜ್ವಾಲೆಯ ಸೌಂದರ್ಯವನ್ನು ಬೆಳಗಿ ತೋರಿಸುವುದು. ಅದೇರೀತಿ, ಮೃತ್ಯುವಿನ ಚಿಂತನೆ ಬಾಳಿನ ನಶ್ವರ ಚೆಲುವನ್ನು ಪ್ರಕಟಗೊಳಿಸುವುದು.

*–ಆಂಥೋನಿ ಡಿ ಮೆಲ್ಲೋ*

ದಯವಿಲ್ಲದ ಧರ್ಮವದೇವುದಯ್ಯಾ?
ದಯವೇ ಬೇಕು ಸಕಲಪ್ರಾಣಿಗಳೆಲ್ಲರಲ್ಲಿಯೂ;
ದಯವೇ ಧರ್ಮದ ಮೂಲವಯ್ಯಾ!
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ!

*–ಬಸವಣ್ಣ*

# ಪರಿಪೂರ್ಣತೆಯನ್ನು ಕುರಿತು

**ಆದರ್ಶದ ಮುಂಬೆಳಗು :** ಬಾಲ್ಯದ ಬೆಳಗು ಉಷಃಕಾಲದಂತೆ. ಇನ್ನೂ ಬೆಳಕಿನ ರೇಖೆಗಳು ಮೂಡಿರುವುದಿಲ್ಲ. ಇಬ್ಬನಿಯ ಹನಿಗಳು ಒಡೆದಿರುವುದಿಲ್ಲ. ನಸುಕು, ಮಬ್ಬುಗತ್ತಲು, ಜೊತೆಗೆ ನೇರಳೆ ಬಣ್ಣದ ಪ್ರಕಾಶ ಕನವರಿಕೆಯ ಕಣ್ಣುಗಳನ್ನು ಸೋಕಿ, 'ಜಾಡ್ಯ ಬಿಟ್ಟೇಳು, ಬೆಳಕಿನತ್ತ ನಡೆ' ಎನ್ನುತ್ತದೆ. ಅದರ ಚೆಲುವೂ ಅದ್ಭುತ, ಕರೆಯೂ ಆಕರ್ಷಕ. ವಿಸ್ಮಯ, ಬೆರಗು, ಕುತೂಹಲಗಳು ಒಗ್ಗೂಡಿ ಬರುತ್ತವೆ. ಹೊಸ ಕಿರಣಗಳ ಜಾಡು ಹಿಡಿದು ಎಳೆಯ ಮನಸ್ಸು ಅರಳುತ್ತದೆ. ಇದೇ ಬಾಲ್ಯ; ಇದೇ ನಿತ್ಯನೂತನ ಜೀವನ. ಎಲ್ಲ ನಾಳೆಗಳ ನಿರ್ಮಾಣ ಅಲ್ಲೇ; ಎಲ್ಲ ಮಹತ್ಸಾಧನೆಗಳ ಬೀಜವೂ ಅದೇ.

ಬಾಲ್ಯದಲ್ಲಿ ನಾವು ಕೇಳುವ ಕಥೆಗಳು, ಓದುವ ಅದ್ಭುತ ರಮ್ಯ ಕಾಲ್ಪನಿಕ ಜಗತ್ತು ಒಂದು ವಿಶಿಷ್ಟ ಮನಸ್ಥಿತಿಯನ್ನು ನಿರ್ಮಾಣ ಮಾಡುತ್ತವೆ. ಅಲ್ಲಿ ಬರುವ ನಾಯಕ-ನಾಯಕಿಯರು, ಪೌರಾಣಿಕ ಐತಿಹಾಸಿಕ ಪಾತ್ರಗಳು ಎಲ್ಲ ಒಳ್ಳೆಯ ಗುಣಗಳ, ಎಲ್ಲ ಆದರ್ಶಗಳ ಜೀವಂತ ಮೂರ್ತಿಗಳು. ಕಥೆಯಾಗಿ ಜಡವಾಗಿದ್ದವು ಎಳೆಯ ಮನಸ್ಸುಗಳನ್ನು ಹೊಕ್ಕು ಜೀವಂತವಾಗುತ್ತವೆ. ಹಲವು ದಿನ, ರಾತ್ರಿ, ತಿಂಗಳುಗಟ್ಟಲೆ ಅವು ಮನೋರಾಜ್ಯದಲ್ಲಿ ವಿಹರಿಸುತ್ತವೆ; ಅನೇಕ ಬಾರಿ ಕನಸಿನಲ್ಲೂ ಬಂದು ಕಾಡುತ್ತವೆ. ಆದರೆ ಈ ಪ್ರೇರಣೆ ಮುಂದಿನ ದಿನಗಳಲ್ಲಿ, ದೈನಂದಿನ ಚಟುವಟಿಕೆಗಳಲ್ಲಿ ವ್ಯಕ್ತವಾಗಿ, ಜೀವನದ ಹೊಸ ಹೆಜ್ಜೆಗಳಾಗಿ ಮಾರ್ಪಡುವುದಿಲ್ಲವೆ? ಕನಸುಗಳು ನನಸಾಗುವ ಸಾಧ್ಯತೆಯಿಲ್ಲವೆ?

ಎಲ್ಲ ಮಹತ್ಕಾರ್ಯಗಳ, ಅದ್ಭುತ ಸಾಧನೆಗಳ ಬೀಜ ಬಾಲ್ಯವೆನ್ನುವುದೇನೋ ನಿಜ. ಆದರೆ ಅವು ಪ್ರತಿಯೊಬ್ಬರ ಬಾಲ್ಯದಲ್ಲಿ ಒಂದೇ ರೀತಿ, ಒಂದೇ ಕ್ರಮದಲ್ಲಿ ರೂಪುಗೊಳ್ಳುವುದಿಲ್ಲ. ಅಲ್ಲಿ ವೈವಿಧ್ಯವಿದೆ, ಏರುಪೇರುಗಳಿವೆ, ಜೀವನದ ವಿವಿಧ ಸ್ತರಗಳಿಗೆ ಅನುಗುಣವಾಗಿ ಹಲವು ಸಾಧ್ಯತೆಗಳಿವೆ. ಆದರೆ ಈ ಎಲ್ಲ ಎಳೆಯ ಮನಸ್ಸುಗಳ ಆಳದಲ್ಲಿ ನಡೆಯುವ ಪ್ರಕ್ರಿಯೆಯಲ್ಲಿ ಒಂದು ಸಮಾನ ಅಂಶವಿದೆ. ಅದು ಸಮಾಜದ, ರಾಷ್ಟ್ರದ ಭವಿಷ್ಯವನ್ನು ಕಟ್ಟುವಲ್ಲಿ ನಿರ್ಣಾಯಕವಾಗಿರುತ್ತದೆ. ಅಷ್ಟೇ ಅಲ್ಲ; ಅದು ವೈಯಕ್ತಿಕ ಸಾಧನೆಯ, ಉನ್ನತಿಯ ಹಾಗೂ ಸಾರ್ಥಕತೆಯ ಮೂಲಸ್ರೋತವಾಗಿರುತ್ತದೆ. ಆ ಸಮಾನ ಅಂಶವೇ – ಪರಿಪೂರ್ಣತೆಯ ಕನಸು.

**ಹೊಸ ದಿಕ್ಕಿನತ್ತ :** ತನ್ನ ಮಿತಿಯನ್ನು ಮೀರಿದ, ಎಲ್ಲವನ್ನೂ ಮೀರಿದ್ದಕ್ಕೆ ಲಗ್ಗೆ ಹಾಕುವ ಪ್ರವೃತ್ತಿ ಮನುಷ್ಯನ ಮೂಲದಲ್ಲೇ ಇದೆ. ಹಕ್ಕಿಗಳನ್ನು ಕಂಡಾಗ ಹಾರಾಡುವ ಆಸೆ ಹುಟ್ಟಿಕೊಳ್ಳುತ್ತದೆ. ಆಕಾಶವನ್ನೇ ಭೇದಿಸುವ ಹಿಮಾಲಯದ ಶಿಖರಗಳನ್ನು ಕಂಡಾಗ, ಅದನ್ನೇರಿ ನಿಲ್ಲುವ ಬಯಕೆ ಮೂಡುತ್ತದೆ. ಇದೇ ರೀತಿ ಸಾಗರೋಲ್ಲಂಘನ, ದೂರಸಂಪರ್ಕ, ನಕ್ಷತ್ರಗಣನೆ, ಜೀವಜಂತುಗಳ ಜಾಲ–ಇವೆಲ್ಲ ಇನ್ನೂ ಅರಿತಿಲ್ಲದ ಲೋಕವನ್ನು ಅರಿಯುವ ಪ್ರಯತ್ನಕ್ಕೆ ನಾಂದಿ ಹಾಡಿದವು. ಭಯ, ವಿಸ್ಮಯ, ಹಿಂಜರಿಕೆಗಳಿಂದ ಅಡಗಿ ಮುದುಡುವ ಪ್ರವೃತ್ತಿ ಇತರ ಜೀವಿಗಳ ಪಾಲಿಗಾಯಿತು; ಮಾನವನೊಬ್ಬ ಇಡೀ ಜೀವಸಂಕುಲದಲ್ಲೇ ವಿಶಿಷ್ಟತೆಯನ್ನು ಮೆರೆದ. ಅವನು ಹೆಜ್ಜೆಯಿಟ್ಟಲ್ಲೆಲ್ಲ ಹೊಸ ಸಂಶೋಧನೆಯಾಯಿತು. ಭೂಮಂಡಲವನ್ನು ದಾಟಿ ಚಂದ್ರ, ಮಂಗಳ... ಇನ್ನು ಎಲ್ಲೆಲ್ಲಿಗೆ ಹೋಗುವನೊ! ಇದೆಲ್ಲ ಸಾಧ್ಯವಾದದ್ದು ಅವನ ಬತ್ತಳಿಕೆಯಲ್ಲಿದ್ದ ಒಂದೇ ಒಂದು ಆಯುಧದಿಂದ – ಅದೇ ಅವನ ಬುದ್ಧಿಶಕ್ತಿ.

ಎಲ್ಲ ತಿಳುವಳಿಕೆ, ವಿಜ್ಞಾನ, ತತ್ತ್ವ, ತಂತ್ರಜ್ಞಾನಗಳು ಈ ಸಾಹಸ ಪ್ರವೃತ್ತಿಯ ಫಲ. ಆದರೆ ಮಾನವ ಅಲ್ಲಿಗೆ ನಿಲ್ಲುವನೆ? ಅನ್ವೇಷಣೆ ಮುಂದುವರೆಯುತ್ತಲೇ ಇದೆ. ಎಷ್ಟು ತಿಳಿದರೂ ಸಾಲದು, ಎಷ್ಟು ಸಿಕ್ಕಿದರೂ ಕಡಿಮೆಯೇ – ಇದೇನು ಆರಿಹೋಗದ ದಾಹವೆ? ಹಿಂಗದ ಹಸಿವೆಯೆ?

ಮಾನವ ಭೂಮಂಡಲದಲ್ಲೆಲ್ಲ ಏಕಚಕ್ರಾಧಿಪತ್ಯ ಸ್ಥಾಪಿಸಿದ್ದಾಗಿದೆ. ಇಡೀ ಪ್ರಕೃತಿಯನ್ನೇ ತನ್ನ ನಿಯಂತ್ರಣದಲ್ಲಿ ಇಟ್ಟುಕೊಂಡಾಗಿದೆ. ತನ್ನ ಸುಖಭೋಗಗಳಿಗೆ, ಆನಂದ ಐಶ್ವರ್ಯಗಳಿಗೆ ಅಗತ್ಯವಿದ್ದುದನ್ನೆಲ್ಲ ಅವನು ನಿರ್ಮಿಸಿಕೊಂಡಿದ್ದಾನೆ. ಇನ್ನೇನು ಬೇಕಾಗಿದೆ? ಇನ್ನೂ ಕೊನೆಗಾಣದ ಹುಡುಕಾಟ ಯಾವುದನ್ನು ಕುರಿತು?

ಬಾಲ್ಯದ ಕನಸುಗಳು, ಎಲ್ಲದರಲ್ಲೂ ಪರಿಪೂರ್ಣತೆಯನ್ನು ಕಂಡುಕೊಳ್ಳುವ ಬಯಕೆ ಮಾನವನನ್ನು ಇನ್ನೂ ಬಿಟ್ಟುಹೋಗಿಲ್ಲ. ಎಲ್ಲ ಪ್ರಶ್ನೆಗಳಿಗೆ, ಸಮಸ್ಯೆಗಳಿಗೆ, ವಿಚಿತ್ರ ವಿದ್ಯಮಾನಗಳಿಗೆ ಉತ್ತರ ಕಂಡುಕೊಳ್ಳುವವರೆಗೂ ಈ ಅನ್ವೇಷಣೆ ಮುಗಿಯದು. ದೇಹ, ಇಂದ್ರಿಯ, ಮನಸ್ಸುಗಳು

ಬಯಸುವ ಸುಖ ಲಭಿಸಿಬಿಟ್ಟರೆ ಮುಗಿಯಿತೆ? ಆ ಸುಖಗಳ ಹಿಂದೆ ಸತತವಾಗಿ ಬೆನ್ನುಹತ್ತಿ ಬರುವ ದುಃಖ, ಕಷ್ಟಗಳ ಅನಿವಾರ್ಯತೆ ಅವನಿಗೆ ತಿಳಿಯದೆ? ಏರುಪೇರುಗಳ, ದ್ವಂದ್ವಗಳ, ಹಲವು ಬಾರಿ ಅರ್ಥಶೂನ್ಯವಾದ ಈ ಬದುಕು ಯಾಕೆ ಹೀಗಿದೆ – ಈ ಬಗೆಯ ಆಲೋಚನೆ ಬಂದಾಗಲೇ ಮನುಷ್ಯನು ತತ್ತ್ವದ ಕಡೆಗೆ ತಿರುಗುತ್ತಾನೆ. ಪರಿಪೂರ್ಣತೆಯನ್ನು ಬಾಹ್ಯಜಗತ್ತಿನಲ್ಲಿ ಅರಸುತ್ತಾ ಬಂದವನಿಗೆ, ಅಲ್ಲಿ ಅದು ಕಾಣಸಿಗುವುದಿಲ್ಲ. ಪ್ರಪಂಚವೆಂಬುದು ಒಂದು ಮರೀಚಿಕೆ ಯೆಂಬುದು ಸ್ಪಷ್ಟವಾಗುತ್ತದೆ. ಆಗ ಅವನು ಇದಕ್ಕೆ ಉತ್ತರವನ್ನು ಕಂಡುಕೊಳ್ಳಲು ಬೇರೆ ವಿಧಾನವನ್ನು ಕಂಡುಕೊಳ್ಳಬೇಕಾಯಿತು; ತನ್ನ ಅಂತರಂಗದ ಆಳಕ್ಕೆ ಇಳಿಯಬೇಕಾಯಿತು. ಹೀಗೆ ಅನ್ವೇಷಣೆಯ ವಿಧಾನವನ್ನು ಬದಲಾಯಿಸಿದ ನಿದರ್ಶನ ಸಿಗುವುದು ಭಾರತದಲ್ಲಿ; ಪ್ರಾಚೀನ ಕಾಲದ ಋಷಿಮುನಿಗಳ ಚಿಂತನೆಯಲ್ಲಿ. ಅದರ ಫಲವಾಗಿ ಅವರಿಗೆ ಗೋಚರವಾದ ಸತ್ಯ ನಿಜವಾಗಿಯೂ ಒಂದು ಹೊಸ ಲೋಕವನ್ನೇ ಅವರ ಮುಂದೆ ತೆರೆಯಿತು. ಅಲ್ಲಿ ಅವರು ಕಂಡದ್ದು ಪರಿಪೂರ್ಣತೆಯ ನೈಜ ನೆಲೆಯನ್ನು.

**ದಿವ್ಯತೆಯ ಸ್ಪರ್ಶ :** ಸಾಮಾನ್ಯವಾಗಿ ಎಳವೆಯಲ್ಲೇ ನಮ್ಮ ಆದರ್ಶವೇನೆಂಬುದನ್ನು ನಾವು ಗುರುತಿಸಿಕೊಳ್ಳುತ್ತೇವೆ. ನಮ್ಮ ಪರಿಸರ, ನಮ್ಮ ಅಭಿರುಚಿ, ನಮ್ಮ ಶಿಕ್ಷಣಕ್ಕೆ ಅನುಗುಣವಾಗಿ ರೂಪುಗೊಳ್ಳುವ ಈ ಆದರ್ಶಗಳು ನಾವು ಬೆಳೆದಂತೆಲ್ಲ ಬದಲಾಗುವುದನ್ನೂ ಕಾಣುತ್ತೇವೆ. ಬಾಲ್ಯದಲ್ಲಿ ಒಬ್ಬ ಉತ್ತಮ ಕಲಾವಿದನಾಗಬೇಕೆಂದುಕೊಂಡ ಒಬ್ಬ ಹುಡುಗ, ಒಬ್ಬ ಶ್ರೇಷ್ಠ ಕಲಾವಿದನಲ್ಲೇ ಇಡೀ ಪ್ರಪಂಚವಿದೆ ಎಂದು ಗುರುತಿಸಿ ಕೊಳ್ಳುತ್ತಾನೆ. ಅವನ ಪ್ರಕಾರ ಆ ಕಲಾವಿದನೇ ಅವನ ಹೀರೋ, ಅವನ ಸರ್ವಸ್ವ; ಅವನ ಪ್ರಕಾರ ಪರಿಪೂರ್ಣ ಮಾನವ. ಎಲ್ಲ ರೀತಿಯಲ್ಲಿ ಅವನನ್ನೇ ಅನುಸರಿಸಲು, ಅನುಕರಿಸಲು ಯತ್ನಿಸುತ್ತಾನೆ. ಅವನ ಈ ಭಾವನೆಗೆ ಸ್ವಲ್ಪ ಘಾಸಿಯಾದರೂ ಅವನು ಸಹಿಸಲಾರ. ಆದರೆ ಅದೇ ಹುಡುಗ ಬೆಳೆದು ದೊಡ್ಡವನಾದಾಗ ಗಮನಿಸುತ್ತಾನೆ, ಅವನ ಆದರ್ಶ ವ್ಯಕ್ತಿಯಾಗಿದ್ದ ಕಲಾವಿದನಿಗಿಂತ ಇನ್ನೂ ದೊಡ್ಡ ದೊಡ್ಡ ಕಲಾವಿದರು ಅದೆಷ್ಟೋ ಮಂದಿ ಇದ್ದಾರೆ. ಅವರಲ್ಲೆಲ್ಲ ಅತ್ಯುತ್ತಮನಾದವನು ಯಾರು ಎಂದು ಅರಸುವುದೇ ಅವನ ಗುರಿಯಾಗುತ್ತದೆ. ಅಥವಾ ವಿಭಿನ್ನ ಪರಿಸರದ ಒತ್ತಡದಿಂದ ಈ ಹುಡುಗನ ಪ್ರವೃತ್ತಿ ಬದಲಾಗಬಹುದು; ಕಲಾವಿದನ ಬದಲು ಒಬ್ಬ ವಿಜ್ಞಾನಿಯೋ, ಸಾಮಾಜಿಕ ಮುಖಂಡನೋ ಅವನ ಆದರ್ಶವಾಗಬಹುದು. ಅವನು ಅಲ್ಲಿ ಪರಿಪೂರ್ಣತೆಯನ್ನು ಅರಸುತ್ತಾ ಹೋಗುತ್ತಾನೆ. ಅನೇಕ ವೇಳೆ ಸೋಲುಗಳು ಅವನನ್ನು ನಿರುತ್ಸಾಹಗೊಳಿಸುವುದು; ವಾಸ್ತವ ಪ್ರಪಂಚಕ್ಕೆ ಎಳೆದು ತರುವುದು. ಆದರೆ ಮತ್ತೆ ಅವನು ಎದ್ದು ನಿಲ್ಲುವನು, ಹೊಸ ನಿರೀಕ್ಷೆಯೊಂದಿಗೆ ಕ್ಷಿತಿಜದತ್ತ ಮುಖ ಮಾಡುವನು. ಇದು ಜೀವನವನ್ನು ಮುನ್ನಡೆಸುವ ಶಕ್ತಿ. ಆದರೆ ಆ ಶಕ್ತಿಯ ಗಮ್ಯವೇನು, ಅದರಿಂದ ತನಗೆ ಬೇಕಾದುದೇನು – ಇದನ್ನವನು ಅರಿತಿರುವುದಿಲ್ಲ. ನಿಜವಾಗಿ ಅವನಿಗೆ ಬೇಕಾಗಿರುವುದು ಪರಿಪೂರ್ಣತೆ. ಕಾಲಕಾಲಕ್ಕೆ ತನ್ನ ಸಾಧನೆಯಲ್ಲೋ, ಇತರರ ಮಹತ್ಕೃತಿಯಲ್ಲೋ ಅವನಿಗೆ ಕಾಣಿಸುವ ಬೆಳಕು, ಅಲ್ಲಿ ಚಿಮ್ಮುವ ಅಸಾಧಾರಣ ಭವ್ಯತೆ ಪರಿಪೂರ್ಣತೆಯ ಒಂದು ಅಂಶ ಅಷ್ಟೇ. ಅದರಿಂದ ಅವನು ಸಂಪೂರ್ಣ ತೊಯ್ದುಹೋದಂತೆ ಕಂಡರೂ, ಎಲ್ಲ ಬಗೆಯ ಸಾರ್ಥಕತೆಯನ್ನು ಅನುಭವಿಸಿದಂತೆ ಕಂಡರೂ, ಅದು ಕ್ಷಣಿಕ, ನಶ್ವರ ಹಾಗೂ ಅಪರಿಪೂರ್ಣ. ಯಾವಾಗ ದಿವ್ಯತೆಯ ಸ್ಪರ್ಶ ಅಲ್ಲಿ ಒದಗಿ ಬರುವುದೋ ಆಗ ಮಾತ್ರ ಅದು ಪರಿಪೂರ್ಣವಾಗುವುದು.

ಹೌದು, **ದಿವ್ಯತೆಯ ಸ್ಪರ್ಶ**. ಇದೇ ನಿಜವಾದ ಅನ್ವೇಷಣೆ. ಅಂತಿಂತಹ ಅನ್ವೇಷಣೆಯಲ್ಲ; ಇಡೀ ಅನುಭವಗಳ ಸರ ಮಾಲೆಯನ್ನೇ ಅಲುಗಾಡಿಸುವ, ಹೊಸ ಸ್ಪರ್ಶದಿಂದ ಎಲ್ಲವನ್ನೂ ಚಿನ್ನವಾಗಿಸುವ ಸ್ಪರ್ಶಮಣಿಯ ಸ್ಪರ್ಶ. 'ಯಾವುದನ್ನು ತಿಳಿದುಕೊಂಡರೆ ಇದೆಲ್ಲವನ್ನೂ ತಿಳಿದು ಕೊಂಡಂತಾಗುವುದು?' *(ಮುಂಡಕೋಪನಿಷತ್ತು ೧.೨.೩)* ಎಂಬ ಪ್ರಶ್ನೆಯಲ್ಲೇ ಈ ದಿವ್ಯತೆಯನ್ನರಿಯುವ ದಿಟ್ಟತನದ ಹೆಜ್ಜೆಯನ್ನು ನಾವು ಗುರುತಿಸಬಹುದು. ಯಾವುದರಿಂದ ಅಳಿವಿಲ್ಲದ ಸತ್ಯವನ್ನು ಕಾಣುತ್ತೇವೋ ಅದೊಂದೇ ನಿಜವಾದ ಜ್ಞಾನ. ಅಂತಹ ಪರಾವಿದ್ಯೆಯೇ ಅಧ್ಯಾತ್ಮ; ಅದರಲ್ಲೇ ಎಲ್ಲ ಅರಸುವಿಕೆ ಅಂತ್ಯಗೊಳ್ಳುವುದು. ಅದೇ ಎಲ್ಲ ಕುತೂಹಲವನ್ನು, ಎಲ್ಲ ದಾಹವನ್ನು ತಣಿಸುವ ಪರಿ ಪೂರ್ಣತೆಯ ತಾಣ. ಅದನ್ನು ಆದರ್ಶವಾಗಿ ಹೊಂದಿರುವ ವಿಭಿನ್ನ ಕ್ಷೇತ್ರಗಳು ಮಾತ್ರ ದಿವ್ಯಸ್ಪರ್ಶದಿಂದ ದೀಪ್ತವಾಗುತ್ತದೆ. ಇದು ಭಾರತೀಯ ಜನಜೀವನದಲ್ಲಿ, ಇಲ್ಲಿನ ಎಲ್ಲ ವಿದ್ಯೆಗಳಲ್ಲಿ ಕಂಡುಬರುವ ಸಮಾನ ಅಂಶ. ಸಾಂಪ್ರದಾಯಿಕವಾಗಿ ನಮ್ಮಲ್ಲಿ ಎಲ್ಲ ಶಾಸ್ತ್ರಗಳೂ, ಕಲೆ, ಸಾಹಿತ್ಯ, ಇತಿಹಾಸ, ಪುರಾಣಗಳೂ, ವಾಸ್ತು, ಜ್ಯೋತಿಷ, ಆಯುರ್ವೇದವೇ ಮೊದಲಾದ ಶಾಖೆಗಳೂ ಅಧ್ಯಾತ್ಮದಲ್ಲಿ ಕೊನೆಗಾಣುತ್ತದೆ; ಅದರಲ್ಲೇ ಪರಿಪೂರ್ಣತೆಯನ್ನು ಕಂಡುಕೊಳ್ಳುತ್ತವೆ. ಆದ್ದ ರಿಂದ ಅಧ್ಯಾತ್ಮವೇ ನಮ್ಮಲ್ಲಿ ಪರಮ ಆದರ್ಶ.

**ಆಧ್ಯಾತ್ಮಿಕ ಆದರ್ಶ :** ಹೀಗೆ ನಮ್ಮಲ್ಲಿ ದಿವ್ಯತೆ ಜನಜೀವನದ ಎಲ್ಲ ಅಂಗಗಳನ್ನು ವ್ಯಾಪಿಸುವುದಕ್ಕೆ ಕಾರಣವಾದ ಆಧ್ಯಾತ್ಮಿಕತೆ, ಒಬ್ಬ ವ್ಯಕ್ತಿ ಹುಟ್ಟಿ ಬೆಳೆಯುತ್ತಲೇ ಆ ದಿವ್ಯತೆಯತ್ತ ಮುಖಮಾಡುವ ಪ್ರವೃತ್ತಿಯನ್ನು ಕಲಿಸಿಕೊಟ್ಟಿತು. ಎಂಥ ಅದ್ಭುತವಾದ ಬೆಳವಣಿಗೆ! ಚಾರಿತ್ರಿಕ ಪರಿವರ್ತನೆಗಳಲ್ಲಿ, ಸಾಮಾಜಿಕ ಬೆಳವಣಿಗೆಗಳಲ್ಲಿ ದಾಖಲೆಯಾಗದ ಈ ಬದಲಾವಣೆ ನಮ್ಮ ಸಂಸ್ಕೃತಿಯಲ್ಲಿ ಮೈಗೂಡಿಕೊಂಡು ಬಂದದ್ದು ಎಂದು, ಹೇಗೆ – ಇದನ್ನು ಹೇಳಲಾಗದು. 'ಸನಾತನ ಧರ್ಮ'ವೆಂದು

ಹೇಳಲಾಗಿರುವ, ವೇದ-ವೇದಾಂತಗಳನ್ನು ಅವಲಂಬಿಸಿದ ವೈದಿಕ ಪರಂಪರೆ ಚಾರಿತ್ರಿಕ ದಾಖಲೆಗಳಿಗಿಂತ ಆಧ್ಯಾತ್ಮಿಕ ಅನುಭವಗಳಿಗೆ ಹಾಗೂ ಮೌಲ್ಯಗಳಿಗೆ ಪ್ರಾಮುಖ್ಯತೆ ನೀಡಿದ್ದೇ ಇದಕ್ಕೆ ಕಾರಣವಾಗಿದ್ದಿರಬೇಕು.

ಈ ಕಾರಣದಿಂದ ಭಾರತದಲ್ಲಿ ಪ್ರಾಪಂಚಿಕ ಉನ್ನತಿ, ಅಭಿವೃದ್ಧಿ, ಬೆಳವಣಿಗೆಗಳಿಗೆ ಹೆಚ್ಚು ಮಹತ್ವ ಸಿಗಲಿಲ್ಲ; ಆಂತರಿಕ ಬೆಳವಣಿಗೆಗೆ ಮಹತ್ವ ಲಭಿಸಿತು. ಮಾನವ ತಲುಪ ಬಹುದಾದ ಶ್ರೇಯಸ್ಸು, ಸಾಧನೆ - ಸಿದ್ಧಿಗಳೇನಿದ್ದರೂ ಅವನ ಅಂತರಂಗದ ಬದುಕಿನಲ್ಲಿ. ಆದ್ದರಿಂದ ಧರ್ಮ, ಆಚರಣೆ, ಆಧ್ಯಾತ್ಮಿಕತೆಗೆ ಅತ್ಯುನ್ನತ ಸ್ಥಾನ ಎಂಬ ಭಾವನೆ ಬೆಳೆದುಬಂತು. ರಾಜಕೀಯವಾಗಿ ಭಾರತ ಅನ್ಯಮತೀಯರ, ಅನ್ಯದೇಶೀಯರ ಒಡೆತನಕ್ಕೆ ಒಳಪಟ್ಟಿದ್ದಾಗಲೂ ಈ ರೀತಿಯ ಆದರ್ಶಭಾವನೆ ಇಲ್ಲಿಂದ ಮರೆಯಾಗಲಿಲ್ಲ. ಪರಿಣಾಮವಾಗಿ, ಆಧ್ಯಾತ್ಮಿಕ ವ್ಯಕ್ತಿಗೆ ಸಿಕ್ಕ ಮಾನ್ಯತೆ, ಮರ್ಯಾದೆ ಹಾಗೂ ಪೂಜ್ಯಭಾವನೆ ಇನ್ನಾರಿಗೂ ಸಲ್ಲುವುದಿಲ್ಲ ಎಂಬುದು ಸ್ಥಿರವಾಯಿತು. ಸ್ವಾತಂತ್ರ್ಯಪೂರ್ವದಲ್ಲಿ ನಮ್ಮಲ್ಲಿ ನಡೆದ ಧಾರ್ಮಿಕ, ಸಾಂಸ್ಕೃತಿಕ ಪುನರುತ್ಥಾನ ಕಾರ್ಯದಲ್ಲಿ ಮೂಡಿಬಂದ ಮಹಾತ್ಮರು ನಮ್ಮ ಆಧ್ಯಾತ್ಮಿಕ ಪರಂಪರೆ ಮುಂದುವರೆಯುವಂತೆ ಮಾಡುವಲ್ಲಿ ಮಹತ್ವದ ಪಾತ್ರವಹಿಸಿದರು ಎಂಬ ಅಂಶ ಗಮನಾರ್ಹ.

**ದಿವ್ಯತೆಯ ಸ್ಪರ್ಶ**ದಿಂದ ಲಭಿಸುವ ಸ್ಫೂರ್ತಿ ವ್ಯಕ್ತಿಯನ್ನು ಆಧ್ಯಾತ್ಮಿಕ ಆದರ್ಶದ ಕಡೆಗೆ ಕೊಂಡೊಯ್ಯುವುದು ಅತ್ಯಂತ ಸಹಜ. ವ್ಯಕ್ತಿ ಭಗವನ್ಮುಖಿನಾದಾಗ ಅವನು ಆಧ್ಯಾತ್ಮಿಕ ಮಹಾಪುರುಷರ ಜೀವನ, ಉಪದೇಶಗಳಿಂದ ಪ್ರೇರಣೆ ಹೊಂದಿ ಅವರ ಆದರ್ಶದಂತೆ ಜೀವನವನ್ನು ರೂಪಿಸು ವುದು ಸಾಧ್ಯವಾಗುತ್ತದೆ. ಬೇರೆ ಎಲ್ಲೂ ಕಾಣದ ಸಮಗ್ರ ಸಂಪೂರ್ಣ ಹಾಗೂ ಅರ್ಥಪೂರ್ಣ ಜೀವನವನ್ನು ಅವನು ಅಲ್ಲಿ ಕಂಡುಕೊಳ್ಳುತ್ತಾನೆ. ಇದೇ ಆದರ್ಶದ ಪರಿಪೂರ್ಣತೆ. ಅಂಥ ಆದರ್ಶ ಕಾಲಮಿತಿಗೆ ಒಳಪಟ್ಟಿದ್ದಲ್ಲ; ಏಕೆಂದರೆ ಈ ಜನ್ಮದಲ್ಲೇ ಆ ಪರಿಪೂರ್ಣತೆ ಲಭ್ಯವಾಗಬೇಕೆಂದಿಲ್ಲ. ಆಧ್ಯಾತ್ಮಿಕ ಪರಿಪೂರ್ಣತೆ ಎಂದರೆ ಸಾಧಕನ ದೃಷ್ಟಿಯಲ್ಲಿ ಭಗವಂತನ ಸಾಕ್ಷಾತ್ಕಾರ. ಅದು ಹಲವು ಸಂಗತಿಗಳನ್ನು, ವಿಶೇಷವಾಗಿ ಭಗವತ್ಕೃಪೆಯನ್ನು ಹಾಗೂ ವೈಯಕ್ತಿಕ ಪ್ರಯತ್ನವನ್ನು ಅವಲಂಬಿಸಿರುವುದರಿಂದ ಈ ಸಾಧನೆಯ ಕಾಲಮಿತಿ ಅನೇಕ ಜನ್ಮಗಳಾಚೆಗೂ ವ್ಯಾಪಿಸುತ್ತದೆ. ಆದ್ದರಿಂದ ಸಾಧುಸಂತರು, ದೈವೀಪುರುಷರು, ಅವತಾರಪುರುಷರೇ ಮೊದಲಾದವರ ಆದರ್ಶ, ಅವರ ಪರಿಪೂರ್ಣ ಜೀವನ ಆಧ್ಯಾತ್ಮಿಕ ಸಾಧಕನ ಜೀವನದುದ್ದಕ್ಕೂ ಅಚ್ಚಳಿಯದ ಪ್ರಭಾವ ಬೀರುತ್ತದೆ.

**ಪರಿಪೂರ್ಣತೆಯ ವ್ಯಾಪ್ತಿ :** ಹಾಗೆ ನೋಡಿದರೆ ಪರಿಪೂರ್ಣತೆಗೆ ಅಂತಿಮ ಮಿತಿ ಎಂಬುದೊಂದಿಲ್ಲ. ಎಲ್ಲಿ ಎಲ್ಲ ಮಿತಿಗಳೂ ಲಯವಾಗಿ, ಎಲ್ಲವೂ ಅನಂತದಲ್ಲಿ ಲೀನವಾಗಿ ದೈವೀ ಅನುಭವದ ಉನ್ನತ ಅವಸ್ಥೆಯನ್ನು ತಲುಪುವುದೋ ಅದೇ ಪರಿಪೂರ್ಣತೆ. **ಯಥಾ ನದ್ಯಃ ಸ್ಯಂದಮಾನಾ ಸಮುದ್ರೇಽಸ್ತಂ ಗಚ್ಛಂತಿ ನಾಮರೂಪೇ ವಿಹಾಯ** - 'ಹೇಗೆ ಹರಿಯುತ್ತಿರುವ ನದಿಗಳು ನಾಮರೂಪಗಳನ್ನು ಬಿಟ್ಟು ಸಮುದ್ರದಲ್ಲಿ ಅದೃಶ್ಯವಾಗುವವೋ' ಎಂದು ಮುಂಡಕೋಪನಿಷತ್ತೂ *(೩.೨.೮)* **ಆಪೂರ್ಯಮಾಣಮಚಲಪ್ರತಿಷ್ಠಂ ಸಮುದ್ರ ಮಾಪಃ ಪ್ರವಿಶಂತಿ ಯದ್ವತ್** - 'ಪೂರ್ಣವಾಗಿಯೂ ಅಚಲವಾಗಿಯೂ ಇರುವ ಸಮುದ್ರವನ್ನು ನದಿಗಳ ನೀರು ಹೇಗೆ ಪ್ರವೇಶಿಸುವವೋ' ಎಂದು ಭಗವದ್ಗೀತೆಯೂ ಈ ಅವಸ್ಥೆಯನ್ನು ವರ್ಣಿಸುತ್ತವೆ. ಜೀವನದ ಯಾವುದೇ ಕ್ಷೇತ್ರದಲ್ಲಾದರೂ ಸರಿ, ಅತ್ಯುನ್ನತ ಆದರ್ಶವಾಗಿ ನಿಲ್ಲುವ ಮಹಾವ್ಯಕ್ತಿಗಳೆಲ್ಲ ಕಡೆಯ ಪಕ್ಷ ಮಾನವತ್ವವೆಂಬ ಮಿತಿಗೆ ಒಳಪಟ್ಟವರು. ಯಾವ ವ್ಯಕ್ತಿತ್ವ 'ಮಾನವತ್ವ'ವೆಂಬ ಮಿತಿಯನ್ನೂ ದಾಟಿ ಅನಂತವಾಗಿ ನಿಲ್ಲುವುದೋ, ಅಂತಹ ಆದರ್ಶ ಆಧ್ಯಾತ್ಮಿಕವಾಗಿ ಅತ್ಯುಚ್ಚವೆನಿಸುವುದು. ಹೀಗೆ ಪರಿ ಪೂರ್ಣತೆ ತನ್ನ ಅಂತಿಮ ಹಂತದಲ್ಲಿ ಎಲ್ಲ ಮಿತಿಗಳಾಚೆ ನಿಂತು, ಎಲ್ಲ ಆದರ್ಶಗಳನ್ನು ಮೀರಿನಿಲ್ಲುವ ತನ್ನ ಅವ್ಯಕ್ತ ಮುಖವನ್ನು ತೋರಿಸುವುದು. ಈ ಪರಿಪೂರ್ಣತೆಯನ್ನು ತಲುಪಿದ ವ್ಯಕ್ತಿ ಪಡೆಯುವ ಅನುಭವವೆಂಥದು? ಉಪ ನಿಷತ್ತುಗಳು, ಭಗವದ್ಗೀತೆ ಹಾಗೂ ಶ್ರೀರಾಮಕೃಷ್ಣರೇ ಮೊದಲಾದವರು ಈ ಅನುಭವಗಳನ್ನು ಹಲವು ಬಗೆ ಯಲ್ಲಿ ವರ್ಣಿಸಲು ಪ್ರಯತ್ನಿಸುತ್ತಾರೆ. ಅದು ಅನಂತವನ್ನು ಸೀಮಿತ ಶಕ್ತಿಯುಳ್ಳ ಭಾಷೆಯಲ್ಲಿ ಹಿಡಿದಿಡುವ ಪ್ರಯತ್ನವಷ್ಟೇ; ಆದರೆ ದಿವ್ಯತೆಯ ಸ್ಪರ್ಶವನ್ನು ಪಡೆದವರ ಮಾತೂ ದಿವ್ಯವೇ, ಅದರಿಂದ ಹೊರಹೊಮ್ಮುವ ಅರ್ಥವೂ ಅನಂತತೆಯ, ಅನಿರ್ವಾಚ್ಯದ ಸೂಚಕವೆ.

ಶ್ರೀರಾಮಕೃಷ್ಣರು ತಮಗಾದ ಸಾಕ್ಷಾತ್ಕಾರದ ಅನುಭವವನ್ನು ಒಂದೆಡೆ ಹೀಗೆ ವರ್ಣಿಸುತ್ತಾರೆ: "ಮನೆ, ಬಾಗಿಲು, ಮಂದಿರ ಎಲ್ಲ ಮಾಯವಾದವು - ಎಲ್ಲೂ ಏನೂ ಕಾಣುತ್ತಿಲ್ಲ. ಕೇವಲ ಅಸೀಮ ಅನಂತ ಜ್ಯೋತಿಃಸಮುದ್ರವೊಂದೇ ಕಾಣುತ್ತಿದೆ. ಎಲ್ಲಿ ನೋಡಿದರೂ, ಎಷ್ಟೇ ದೂರ ಕಣ್ಣು ಹಾಯಿಸಿದರೂ ನಾಲ್ಕೂ ಕಡೆಯೂ ಅದರ ಉಜ್ವಲ ಜ್ವಾಲಾಮಾಲೆಯು ಭೋರ್ಗರೆಯುತ್ತ ಎಲ್ಲವನ್ನೂ ನುಂಗಿಹಾಕವಂತೆ ಮುನ್ನುಗ್ಗು ತ್ತಿತ್ತು. ನೋಡುತ್ತಿದ್ದಂತೆಯೇ ಅದು ನನ್ನ ಮೇಲೆ ಎರಗಿ ನನ್ನನ್ನು ಎಲ್ಲಿಯೋ ಮುಳುಗಿಸಿಬಿಟ್ಟಿತು. ನಾನು ಏಳುತ್ತ ಮುಳುಗುತ್ತ ಪ್ರಜ್ಞಾಶೂನ್ಯನಾಗಿ ಬಿದ್ದುಬಿಟ್ಟೆ." *(ಶ್ರೀರಾಮಕೃಷ್ಣ ಲೀಲಾಪ್ರಸಂಗ ಭಾಗ ೧, ಪು.೧೯೭-೯೮)*

ಇದೇ ರೀತಿ ಸ್ವಾಮಿ ವಿವೇಕಾನಂದರು ತಮ್ಮ 'ಸಮಾಧಿ' ಎಂಬ ಕವನದಲ್ಲಿ ವರ್ಣಿಸಿರುವ ಆಧ್ಯಾತ್ಮಿಕ ಅನುಭೂತಿಯೂ ದಿವ್ಯವಾದ ಅವಸ್ಥೆಯ ಅಸಾಧಾರಣ ಸ್ಥಿತಿಯನ್ನು ಸೂಚಿಸುತ್ತದೆ. ನಮ್ಮ ಆದರ್ಶಪುರುಷರು,

ನಮ್ಮ ಆದರ್ಶಗಳು ಅತ್ಯುನ್ನತವಾಗಿರಬೇಕು; ಹಾಗಾದರೆ ಮಾತ್ರ ನಾವು ಮಹತ್ತನ್ನು ಸಾಧಿಸಲು ಸಾಧ್ಯ ಎನ್ನುತ್ತಾರೆ ಸ್ವಾಮಿ ವಿವೇಕಾನಂದರು. ಎಲ್ಲ ವ್ಯಕ್ತಿಗಳೂ ಅತ್ಯುನ್ನತ ಆದರ್ಶವನ್ನು, ಪರಿಪೂರ್ಣತೆಯನ್ನು ಅದರ ಅತ್ಯುನ್ನತ ಹಂತದಲ್ಲಿ ಪಡೆಯುವುದು ಸಾಧ್ಯವಾಗದಿರಬಹುದು. ಆದರೆ, 'ಆದರ್ಶವನ್ನು ಎಂದಿಗೂ ಕೆಳಗೆ ಎಳೆಯಬೇಡಿ' ಎನ್ನುತ್ತಾರೆ ಸ್ವಾಮೀಜಿ. ಸಾವಿರದಲ್ಲಿ ಒಬ್ಬನಾದರೂ ಗುರಿ ತಲುಪಬಹುದು; ಆದರೆ ಅದಕ್ಕೆ ಉಳಿದ ಎಲ್ಲರ ಹೋರಾಟ ಸೋಪಾನವಾಗುವುದು. ಆದರೆ ಆದರ್ಶ, ಗುರಿ ಸಣ್ಣದಾಗಿದ್ದರೆ, ನಾವು ತಲುಪುವ ಗುರಿಯೂ ಅಲ್ಪವೆ, ನಮ್ಮ ಸಾಧನೆಯೂ ಅತ್ಯಲ್ಪವೆ. ಇಂಥ ಸೀಮಿತತೆಯಿಂದ ನಾವು ತೃಪ್ತರಾಗುವುದಿಲ್ಲ. ಏಕೆಂದರೆ ನಮ್ಮ ಪರಂಪರೆ ನಮಗೆ ಕಲಿಸಿದ ಗುಣವೇ ಇದು – 'ಎಲ್ಲವನ್ನೂ ಮೀರಿ ಹೋಗು'. ಆತ್ಯಂತಿಕವಾದ, ಪರಿಪೂರ್ಣವಾದ ಒಂದು ನೆಲೆಯನ್ನು ತಲುಪಿದಲ್ಲದೆ ನಾವು ವಿರಮಿಸಲಾರೆವು.

**ಆಧುನಿಕತೆಗೆ ಅಭಿಮುಖವಾಗಿ :** ಪರಿಪೂರ್ಣತೆಯನ್ನು ಅರಿತುಕೊಳ್ಳುವ ಹಂತದಲ್ಲಿ ಹಲವು ಅಡೆತಡೆಗಳಿದ್ದರೂ, ಅನುಭವದಿಂದ ಕಲಿಯುವ ಪಾಠ ನಮ್ಮನ್ನು ಗುರಿಯತ್ತ ಕರೆದೊಯ್ಯುವುದು. ಭೌತಿಕ ಜಗತ್ತಿನ ಹತ್ತು ಹಲವು ವಿಷಯಗಳ ಬಗ್ಗೆ ನಿರಂತರ ಸಂಶೋಧನೆ ನಡೆಸುತ್ತಿರುವ ವೈಜ್ಞಾನಿಕ ಕ್ಷೇತ್ರದಲ್ಲಿ, ಭೌತಿಕ ಮಿತಿಯಾಚೆ ಸಾಗುವ ವಿದ್ಯಮಾನ ಹಲವು ಬಾರಿ ನಡೆದಿದೆ. (ಈಚೆಗೆ ಚರ್ಚೆಗೊಳಗಾದ 'ದೇವಕಣ'ದ ಸಂಶೋಧನೆ ಇದಕ್ಕೆ ಉತ್ತಮ ಉದಾಹರಣೆ.) ಆದರೆ ಅಂತರಂಗದ ಅನ್ವೇಷಣೆಗೆ ವೈಜ್ಞಾನಿಕ ಮನೋಭಾವದ ಮನಸ್ಸು ತೆರೆದುಕೊಂಡಲ್ಲದೆ ಭೌತಿಕ ಪ್ರಪಂಚದ ಆಧ್ಯಾತ್ಮಿಕ ಆಯಾಮ ಗೋಚರವಾಗದು ಎಂಬ ಸತ್ಯ ಇಂದಿಗೂ ಪ್ರಸ್ತುತವೆ. ವೈಯಕ್ತಿಕ ಅಭಿಪ್ರಾಯದ ನೆಲೆಯಲ್ಲಿ ಮಾತ್ರ ಸ್ವೀಕೃತವಾಗುವ ಆಧ್ಯಾತ್ಮಿಕ ಆಯಾಮ ಸಾರ್ವತ್ರಿಕವಾಗುವುದು ಹೇಗೆ ಎನ್ನುವುದೇ ಆಧುನಿಕ ಜಗತ್ತಿನಲ್ಲಿ ಒಂದು ಸವಾಲು. ಆಧ್ಯಾತ್ಮಿಕತೆಯನ್ನೇ ಒಪ್ಪದ ಮನೋಭಾವದವರಿಗೂ ಧರ್ಮವನ್ನು ವೈಜ್ಞಾನಿಕ ಭಾಷೆಯಲ್ಲಿ ಅರ್ಥವಾಗುವಂತೆ ವಿವರಿಸಿಕೊಟ್ಟ ಸ್ವಾಮಿ ವಿವೇಕಾನಂದರ ವಿಧಾನ ಅತ್ಯಂತ ಪ್ರಸ್ತುತವಾಗುವುದು ಇಲ್ಲಿ. ಆಧುನಿಕ ಪ್ರವೃತ್ತಿಗೆ ಒಗ್ಗುವ ಆದರ್ಶವನ್ನು ಅತ್ಯಂತ ಸಮರ್ಪಕವಾಗಿ ಹಾಕಿಕೊಟ್ಟ ಶ್ರೇಯಸ್ಸು ಅವರಿಗೆ ಸಲ್ಲುತ್ತದೆ.

ಪರಿಪೂರ್ಣತೆಯನ್ನು ಕುರಿತು ಚಿಂತಿಸುವಾಗ ಮೂಡಿಬಂದ ಕೆಲವು ಅಂಶಗಳನ್ನು ಹೀಗೆ ಸಂಗ್ರಹಿಸಬಹುದು: ೧) ಬಾಲ್ಯದಲ್ಲಿ ಆದರ್ಶಗಳು ರೂಪುಗೊಳ್ಳುತ್ತವೆ; ಅಲ್ಲೇ ಪರಿಪೂರ್ಣತೆಯ ಕನಸು ಮೂಡುತ್ತದೆ. ೨) ಬಾಹ್ಯಪ್ರಪಂಚವನ್ನು ದಾಟಿ ಹೋಗಿ, ಅವ್ಯಕ್ತತೆಯ ಕಡೆಗೆ ಹೊರಳಿದಾಗಲೇ ಪರಿಪೂರ್ಣತೆಯ ಆದರ್ಶ ಕಂಡುಬರುವುದು. ೩) ದಿವ್ಯತೆಯ ಸ್ಪರ್ಶದಿಂದ ನಮ್ಮ ಜನಜೀವನದಲ್ಲೆಲ್ಲ ಆಧ್ಯಾತ್ಮಿಕ ಆದರ್ಶ ಅತ್ಯುನ್ನತವೆಂಬುದು ನೆಲೆನಿಂತಿತು. ೪) ವ್ಯಕ್ತಿಯ ಆದರ್ಶ ಆಧ್ಯಾತ್ಮಿಕವಾಗುವುದು ಭಾರತದ ಸಾಂಸ್ಕೃತಿಕ ಇತಿಹಾಸದಲ್ಲಿ ನಡೆದ ಒಂದು ಪ್ರಮುಖ ಬದಲಾವಣೆ. ೫) ಅವ್ಯಕ್ತ ಅನುಭವ ಪಡೆದ ಮಹಾತ್ಮರ ಜೀವನವೇ ನಮ್ಮ ಅತ್ಯುಚ್ಚ ಆದರ್ಶ. ೬) ಆಧುನಿಕ ವೈಜ್ಞಾನಿಕ ಮನೋಭಾವವೂ ಆಧ್ಯಾತ್ಮಿಕ ಆದರ್ಶವನ್ನು ಹೊಂದುವ ಅಗತ್ಯವಿದೆ.

ಪರಿಪೂರ್ಣತೆಯನ್ನು ಕುರಿತು ಚಿಂತಿಸುವಾಗ ಅಗಾಧ ಅರ್ಥಗಳನ್ನು ಹೊಮ್ಮಿಸಬಲ್ಲ ಪ್ರಸಿದ್ಧ ಶಾಂತಿಮಂತ್ರವನ್ನು ಮರೆಯಲಾದೀತೆ?

**ಓಂ । ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ।**
**ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ॥**
ಓಂ ಶಾಂತಿಃ ಶಾಂತಿಃ ಶಾಂತಿಃ ॥



## ಸ್ವಾಮಿ ತುರೀಯಾನಂದರು ಹೇಳಿದ ಕಥೆ

ಒಮ್ಮೆ ನಾರದರು ವಿಷ್ಣುವನ್ನು ಆತನ ಅತ್ಯಂತ ದೊಡ್ಡ ಭಕ್ತನು ಯಾರೆಂದು ಕೇಳಿದನು. ಉತ್ತರ ಕೊಡುತ್ತಾ ದೇವರು ಹೀಗೆಂದನು: "ಇಂಥಾ ಹಳ್ಳಿಯಲ್ಲಿ ಒಬ್ಬ ರೈತನಿದ್ದಾನೆ. ಅವನೇ ನನ್ನ ಅತ್ಯಂತ ಹತ್ತಿರದ ಭಕ್ತ. ಹೋಗಿ ಅವನನ್ನೊಮ್ಮೆ ನೋಡಿ ಬಾ." ನಾರದ ಆ ಸ್ಥಳಕ್ಕೆ ಹೋದಾಗ ರೈತ ಹೊಲಕ್ಕೆ ಹೋಗಿದ್ದನು. ಸಂಜೆ ರೈತ ಮನೆಗೆ ಹಿಂದಿರುಗಿ ಭಗವನ್ನಾಮವನ್ನೊಮ್ಮೆ ಉಚ್ಚರಿಸಿ, ನಂತರ ಮಲಗಲು ಹೋದನು. ಇದನ್ನೆಲ್ಲಾ ನೋಡಿದ ನಾರದರು ಭಗವಂತನ ಬಳಿಗೆ ಹಿಂದಿರುಗಿ ಬಂದು, 'ಇದು ಹೇಗೆ ಭಗವಾನ್? ಇಡೀ ದಿನವೆಲ್ಲಾ ಕ್ಷುದ್ರವಾದ ಪ್ರಾಪಂಚಿಕೋದ್ಯಮದಲ್ಲಿ ಮುಳುಗಿ, ಒಮ್ಮೆ ಮಾತ್ರ ನಿನ್ನ ನಾಮವನ್ನುಚ್ಚರಿಸಿದ ಮಾತ್ರಕ್ಕೆ ಆ ರೈತ ನಿನ್ನ ಭಕ್ತಾಗ್ರಣಿಯಾಗುವುದೆಂದರೇನು?' ಎಂದರು. ಭಗವಂತನು ನಾರದರಿಗೆ, 'ಸರಿ ನಾರದ, ನಿನ್ನ ಪ್ರಶ್ನೆಗೆ ಬೇಗ ಉತ್ತರ ದೊರಕುವುದು. ಪೂರ್ತಿ ತುಂಬಿರುವ ಈ ಎಣ್ಣೆ ಬಟ್ಟಲನ್ನು ತೆಗೆದುಕೊಂಡು ಪ್ರಪಂಚವನ್ನೆಲ್ಲಾ ಬಳಸಿಕೊಂಡು ಬಾ' ಎಂದನು. ನಾರದರು ಎಚ್ಚರಿಕೆಯಿಂದ ಪ್ರಪಂಚವನ್ನೆಲ್ಲಾ ಬಳಸಿ ಹಿಂದಿರುಗಿ ಬಂದರು. ಆಗ ವಿಷ್ಣು ನಾರದರನ್ನು, 'ಸರಿ ನಾರದ, ನೀನು ಎಷ್ಟು ಬಾರಿ ನನ್ನನ್ನು ನೆನೆಸಿಕೊಂಡೆ?' ಎಂದು ಕೇಳಿದನು. ನಾರದರು, 'ನಾನು ಹೇಗೆ ನಿನ್ನನ್ನು ಸ್ಮರಿಸಲಿ? ನನ್ನ ಲಕ್ಷ್ಯವೆಲ್ಲಾ ಎಣ್ಣೆಯ ಕಡೆಗಿತ್ತು' ಎಂದರು. ಅದಕ್ಕೆ ವಿಷ್ಣು, 'ಸರಿ, ಎಣ್ಣೆ ಎಲ್ಲಿ ಬಟ್ಟಲಿನಿಂದ ಚೆಲ್ಲಿಹೋಗುವುದೋ ಎಂಬ ಚಿಂತೆಯಲ್ಲಿ ನೀನು ಒಮ್ಮೆ ಕೂಡ ನನ್ನನ್ನು ನೆನೆಸಿಕೊಳ್ಳಲಿಲ್ಲ. ಆ ರೈತನಾದರೋ ಇಡೀ ದಿನವೆಲ್ಲಾ ಕೆಲಸದಲ್ಲಿ ಮುಳುಗಿಹೋಗಿದ್ದರೂ ಕೂಡ ಪ್ರತಿ ದಿನವೂ ತನ್ನ ನಿತ್ಯಕೆಲಸವಾದ ನಂತರ ತಪ್ಪದೆ ನನ್ನನ್ನು ಜ್ಞಾಪಿಸಿಕೊಳ್ಳುವನು. ಈಗ ನೀನೇ ಹೇಳು, ಅವನು ಭಕ್ತಶ್ರೇಷ್ಠನಲ್ಲವೆ?' ಎಂದನು.

*('ಸಾಧಕನ ಕೈದೀವಿಗೆ' ಗ್ರಂಥದಿಂದ, ಪು.೬೩)*



# ಎಲ್ಲವೂ ಭಗವಂತನೆ

- ಯಾರಿಗೆ ಭಗವಂತನ ಸಾಕ್ಷಾತ್ಕಾರವಾಗಿದೆಯೋ ಆತನಿಗೆ ಭಗವಂತನೇ ಈ ಜೀವ, ಜಗತ್ತಾಗಿರುವಂತೆ, ಎಲ್ಲವೂ ಆತನೇ ಆಗಿರುವಂತೆ ಕಂಡುಬರುತ್ತದೆ. ಆತನಿಗೇನೇ ಉತ್ತಮ ಭಕ್ತ ಅಂತ ಹೆಸರು.

- ಆತನೇ ಎಲ್ಲಾ ಆಗಿರುವುದನ್ನು ನಾನು ನೋಡಿದೆ. ಯಾರು ಹೆಂಗಸರ ಪಾತ್ರ ವಹಿಸಿದ್ದರೊ ಅವರು ಸಾಕ್ಷಾತ್ ಆನಂದಮಯಿಯಾಗಿಯೇ ಕಂಡುಬಂದರು. ಯಾರು ಗೋಲೋಕದ ಗೋಪಾಲರ ಪಾತ್ರ ವಹಿಸಿದ್ದರೋ ಅವರು ಸಾಕ್ಷಾತ್ ನಾರಾಯಣನಾಗಿಯೇ ತೋರಿ ಬಂದರು, ಎಲ್ಲವೂ ಆತನೇ ಆಗಿದ್ದಾನೆ.

- ಭಗವಂತ ಪ್ರತಿಯೊಂದರಲ್ಲಿಯೂ ಇದ್ದಾನೆ. ಆದರೆ ಆತನ ಶಕ್ತಿ ಕೆಲವೆಡೆ ಅಧಿಕವಾಗಿ, ಕೆಲವೆಡೆ ಕಡಿಮೆಯಾಗಿ ವ್ಯಕ್ತವಾಗಿದೆ ಅಷ್ಟೆ. ಅವತಾರದ ಮೂಲಕ ಆತನ ಶಕ್ತಿ ವಿಶೇಷ ಪ್ರಮಾಣದಲ್ಲಿ ವ್ಯಕ್ತವಾಗುತ್ತದೆ; ಕೆಲವು ಅವತಾರಗಳಲ್ಲಿ ಒಮ್ಮೊಮ್ಮೆ ಆತನ ಶಕ್ತಿ ಪೂರ್ಣ ಪ್ರಮಾಣದಲ್ಲಿ ವ್ಯಕ್ತವಾಗುತ್ತದೆ; ಅದು ಇಡೀ ಶಕ್ತಿಯ ಅವತಾರವೇ."

- ಸತ್ಯವೇನೆಂದರೆ, ಎಲ್ಲವೂ ಆತನ ಇಚ್ಛೆಗನುಸಾರವಾಗಿ ನಡೆಯುತ್ತಿದೆ. ಆತ 'ಹ್ಞೂ' ಎಂದೊಡನೆಯೆ ಜಗತ್ತಿನ ಪ್ರತಿಯೊಂದೂ ಸಂಭವಿಸಲಾರಂಭಿಸುತ್ತದೆ. ಆತ 'ಉಹ್ಞೂ' ಎಂದೊಡನೆಯೆ ಪ್ರತಿಯೊಂದು ನಿಂತಲ್ಲಿಯೇ ನಿಂತುಬಿಡುತ್ತದೆ.

- ಭಗವಂತನನ್ನು ಒಂದು ಮಹಾಸಮುದ್ರಕ್ಕೂ, ಜೀವಗಳನ್ನು ಅದರಲ್ಲಿ ತೇಲುವ ಗುಳ್ಳೆಗಳಿಗೂ ಹೋಲಿಸಬಹುದು. ಅವು ಆತನಲ್ಲಿಯೇ ಉದ್ಭವಿಸಿ ಆತನಲ್ಲಿಯೇ ಲಯವಾಗುತ್ತವೆ. ಮಕ್ಕಳು ಮರಿಗಳೆಂಬುವುಗಳನ್ನು ದೊಡ್ಡ ಗುಳ್ಳೆಯ ಸುತ್ತಲೂ ಸೇರಿಕೊಂಡಿರುವ ಚಿಕ್ಕ ಗುಳ್ಳೆಗಳಿಗೆ ಹೋಲಿಸಬಹುದು.

- ಆತನೇ ಜೀವ, ಜಗತ್ತಾಗಿದ್ದಾನೆ; ಚತುರ್ವಿಂಶತಿ ತತ್ತ್ವಗಳಾಗಿದ್ದಾನೆ. ಯಾವಾಗ ಆತ ನಿಷ್ಕ್ರಿಯನೋ ಆಗ ಆತನಿಗೆ ಬ್ರಹ್ಮ ಅಂತಲೂ, ಯಾವಾಗ ಆತ ಸೃಷ್ಟಿ ಸ್ಥಿತಿ ಪ್ರಳಯ ಕಾರ್ಯಗಳನ್ನು ಮಾಡುತ್ತಾನೊ ಆಗ ಆತನಿಗೆ ಶಕ್ತಿ ಅಂತಲೂ ಕರೆಯುತ್ತೇವೆ. ಬ್ರಹ್ಮ-ಶಕ್ತಿ ಅಭೇದ. ನೀರು ಸ್ಥಿರವಾಗಿ ನಿಂತಿದ್ದರೂ ನೀರೆ, ಚಲಿಸುತ್ತಿದ್ದರೂ ನೀರೆ.

- ಯಾವ ಇಟ್ಟಿಗೆ, ಸುಣ್ಣ, ಮರಳು ಇವುಗಳಿಂದ ಮೆಟ್ಟಿಲ ಸಾಲು ನಿರ್ಮಿತವಾಗಿರುವುದೋ ಅದೇ ಇಟ್ಟಿಗೆ, ಸುಣ್ಣ, ಮರಳು ಇವುಗಳಿಂದ ಮೇಲ್ಛಾವಣಿಯೂ ನಿರ್ಮಿತವಾಗಿದೆ. ಬ್ರಹ್ಮ ಯಾರೋ, ಆತನ ಸತ್ತ್ವದಿಂದಲೇ ಈ ಜೀವ, ಜಗತ್ತು ಬದುಕಿಕೊಂಡಿದೆ.

- ಭಕ್ತರು, ಎಂದರೆ ವಿಜ್ಞಾನಿಗಳು ಸಾಕಾರ ನಿರಾಕಾರ ಎರಡನ್ನೂ, ರೂಪ ಅರೂಪ ಎರಡನ್ನೂ ಸ್ವೀಕರಿಸುತ್ತಾರೆ. ಅಪಾರವಾದ ಮಹಾಸಾಗರದಲ್ಲಿ ಅನಂತ ಜಲರಾಶಿಯಲ್ಲಿ ಶೈತ್ಯದ ದೆಸೆಯಿಂದ ನೀರು ಅಲ್ಲಿ ಇಲ್ಲಿ ಹಿಮಗಡ್ಡೆಗಳಾಗಿ ಪರಿವರ್ತನೆ ಹೊಂದಿರುವುದನ್ನು ನಾವು ನೋಡಬಹುದು. ಅದೇ ರೀತಿಯಾಗಿ ಭಕ್ತನ ಭಕ್ತಿ ಎಂಬ ಶೈತ್ಯದ ದೆಸೆಯಿಂದ ಆ ಅನಂತ ಸಾಂತವಾಗಿ, ಎಂದರೆ ಸಾಕಾರರೂಪವನ್ನು ತಾಳಿ ಭಕ್ತನಿಗೆ ಗೋಚರವಾಗುತ್ತದೆ. ಯಾವ ರೀತಿಯಾಗಿ ಸೂರ್ಯೋದಯವಾದ ನಂತರ ಹಿಮಗಡ್ಡೆ ಕರಗಿ ನೀರಾಗುವುದೋ, ಅದೇ ರೀತಿಯಾಗಿ ಜ್ಞಾನಸೂರ್ಯೋದಯವಾದ ನಂತರ ಸಾಕಾರ ರೂಪವು ಕರಗಿ ಎಂದಿನ ನಿರಾಕಾರ ಸ್ಥಿತಿಗೆ-ಅನಂತ ಸ್ಥಿತಿಗೆ ಹಿಂದಿರುಗುತ್ತದೆ.

- ಭಗವಂತನೇ ಈ ಎಲ್ಲವೂ ಆಗಿದ್ದಾನೆ; ಆದರೆ ಕೆಲಕೆಲವರಲ್ಲಿ ಆತ ಹೆಚ್ಚು ವ್ಯಕ್ತವಾಗಿದ್ದಾನೆ.

- ಆತ, ತಾನೇ ಎಲ್ಲವೂ ಆಗಿದ್ದಾನೆ – ಎಂದರೆ ಜೀವಜಗತ್ತಾಗಿದ್ದಾನೆ. ಪೂರ್ಣಜ್ಞಾನ ದೊರೆತಾಗ ಈ ಅನುಭವವಾಗುತ್ತದೆ. ಆತನೇ ಚತುರ್ವಿಂಶತಿ ತತ್ತ್ವಗಳಾಗಿದ್ದಾನೆ – ಎಂದರೆ ಮನಸ್ಸು, ಬುದ್ಧಿ, ದೇಹ ಇವೇ ಮೊದಲಾದವುಗಳಾಗಿದ್ದಾನೆ. ಆತನೊಬ್ಬನಲ್ಲದೆ ಬೇರೆ ಯಾರಾದರೂ ಇರುವರೇನು, ಪಕ್ಷಪಾತ ತೋರಿಸುವುದಕ್ಕೆ?

- ಆತನ ಸಾಕ್ಷಾತ್ಕಾರವನ್ನು ಪಡೆದ ನಂತರ ಅನುಭವವಾಗುತ್ತದೆ, ಆತನೇ ಈ ಜೀವಜಗತ್ತು, ಮಾಯೆ ಆಗಿದ್ದಾನೆ, ಎಂಬುದಾಗಿ. 'ನೇತಿ, ನೇತಿ' ಮಾರ್ಗಗಾಮಿಗಳಿಗೆ ಈ ಜಗತ್ತು ನಿಸ್ಸಂದೇಹವಾಗಿ 'ಮಾಯೆಯ ಕ್ರೀಡಾಗೃಹ', ಸ್ವಪ್ನದೋಪಾದಿಯಲ್ಲಿ ಮಿಥ್ಯವಾದ್ದು ಎಂಬ ಅನುಭವವಾಗುತ್ತದೆ. ಆದರೆ ಆತನ ಸಾಕ್ಷಾತ್ಕಾರ ದೊರೆತ ನಂತರ ಈ ಜಗತ್ತೇ 'ಆನಂದದ ಕ್ರೀಡಾಗೃಹ' ಆಗುತ್ತದೆ.

'ಶ್ರೀರಾಮಕೃಷ್ಣ ವಚನವೇದ'ದಿಂದ

# ಭಗವಾನ್ ರಮಣ ಮಹರ್ಷಿಗಳೊಂದಿಗೆ

ಸ್ವಾಮಿ ದಾಮೋದರಾನಂದ

## ಭಾಗ–೨

**ಆಶ್ರಮದ ದಿನಚರಿ :** ನನಗೆ ನೆನಪಿರುವಂತೆ ಆಗ ಆಶ್ರಮದ ದಿನಚರಿ ಹೀಗಿತ್ತು: ಬೆಳಗಿನ ಜಾವ ನಾಲ್ಕು ಘಂಟೆಗೇ ಭಕ್ತರು ಬಂದು ಹಾಲ್‌ನಲ್ಲಿ ಪ್ರಾರ್ಥನೆ ಮತ್ತು ಧ್ಯಾನಕ್ಕಾಗಿ ಸೇರುತ್ತಿದ್ದರು. ಅಂತಹ ಒಂದು ಸಂದರ್ಭದಲ್ಲಿ ಶ್ರೀಮತಿ ಕಾಮಾಕ್ಷಿ ಎಂಬ ಒಬ್ಬ ಭಕ್ತೆ ಹಾಲ್ ಪ್ರವೇಶಿಸಿ, ಭಗವಾನರಿಗೆ ನಮಸ್ಕರಿಸಿ ಮೇಲೆದ್ದರು. ಶ್ರೀಭಗವಾನರು ಆಕೆಯನ್ನು ಕರೆದು, ಒಂದು ಸಣ್ಣ ಚೀಟಿಯನ್ನು ಅವರಿಗೆ ತೋರಿಸಿದರು. ಅದರ ಮೇಲೆ 'ಓಂ ನಮೋ ಭಗವತೇ ಶ್ರೀರಮಣಾಯ' ಎಂದು ಬರೆದಿತ್ತು. ಅದನ್ನು ಸದಾ ಜಪಿಸಬೇಕೆಂದು ಅವರು ಆಕೆಗೆ ಹೇಳಿದರು. (ಆಕೆ ತಮ್ಮ ಜೀವನ ಪೂರ್ತಿ ಅದನ್ನು ಜಪಿಸಿದರಂತೆ.) ಬೆಳಕು ಮೂಡುತ್ತಿರುವಾಗ ಆಶ್ರಮದ ವೇದಪಾಠಶಾಲೆಯ ಆಚಾರ್ಯರು ತಮ್ಮ ಶಿಷ್ಯರನ್ನು ಅಲ್ಲಿಗೆ ಕರೆದುಕೊಂಡು ಬರುತ್ತಿದ್ದರು. ಅವರು ದಶಶಾಂತಿ ಮಂತ್ರಗಳು, ಪುರುಷಸೂಕ್ತ, ನಾರಾಯಣಸೂಕ್ತ ಮೊದಲಾದ ವೇದಮಂತ್ರಗಳನ್ನು ಪಾರಾಯಣ ಮಾಡುತ್ತಿದ್ದರು. ಆಮೇಲೆ ಭಕ್ತರು ತಮಿಳು, ತೆಲುಗು, ಮಲೆಯಾಳ ಮೊದಲಾದ ಭಾಷೆಗಳಲ್ಲಿ ಭಜನೆ ಮಾಡುತ್ತಿದ್ದರು. ಯಾವಾಗಲೂ ಭಗವಾನರು ತಮ್ಮ ಆಸನದಲ್ಲಿ ಅರ್ಧ ಕಣ್ಣುಮುಚ್ಚಿ ತಮ್ಮೊಳಗೆ ತಾವೇ ಲೀನರಾಗಿ ಕುಳಿತಿರುತ್ತಿದ್ದರು. ಭಜನೆ ಮುಗಿದ ಮೇಲೆ ಭಕ್ತರೆಲ್ಲರೂ ಮೌನವಾಗಿ ಕುಳಿತು ಸ್ವಲ್ಪ ಹೊತ್ತು ಧ್ಯಾನ ಮಾಡುತ್ತಿದ್ದರು. ೭.೩೦ರ ವೇಳೆಗೆ ಆಶ್ರಮವಾಸಿಗಳು, ಅತಿಥಿಗಳು ಮತ್ತು ಇತರರು ಊಟದ ಮನೆಯ ಹೊರಗಿನ ಪಡಸಾಲೆಯಲ್ಲಿ ಇಡ್ಲಿ, ಚಟ್ನಿ ಉಪಾಹಾರಕ್ಕಾಗಿ ಬಂದು ಸೇರುತ್ತಿದ್ದರು. ಬೆಳಗಿನ ಉಪಾಹಾರದ ನಂತರ ಅಲ್ಲಿ ವಸತಿ ವ್ಯವಸ್ಥೆ ಪಡೆಯದ ಭಕ್ತರು ಶ್ರೀಭಗವಾನರಿಗೆ ಪ್ರಣಾಮ ಸಲ್ಲಿಸುವ ಸಮಯ. ಭಗವಾನರು ಆಗ ಹಾಲ್‌ನಲ್ಲಿ ತಮ್ಮ ಆಸನ ಅಥವಾ ಸೋಫಾದಲ್ಲಿ ನೇರವಾಗಿ, ಅಥವಾ ಒರಗಿಕೊಂಡು ಕುಳಿತಿರುತ್ತಿದ್ದರು.

ಕೆಲವೊಮ್ಮೆ ಹಾಲ್ ತುಂಬಿರುತ್ತಿತ್ತು. ಸಾಧಾರಣವಾಗಿ ಅಲ್ಲಿ ಮಹಾನ್ ಬ್ರಹ್ಮಜ್ಞಾನಿಯ ಸನ್ನಿಧಿಯಲ್ಲಿ ಅನುಭವವಾಗುವ ಶಾಂತಿ, ಆನಂದಗಳನ್ನು ಅನುಭವಿಸುತ್ತಾ ಭಕ್ತರೆಲ್ಲ ಮೌನವಾಗಿರುತ್ತಿದ್ದರು. ಭಗವಾನರ ದಿವ್ಯತೆಯ ಶಾಂತಿ, ಆನಂದಗಳ ಪವಿತ್ರ ತರಂಗಗಳು ಅನುರಣಿಸುತ್ತಿದ್ದ ಆ ಹಾಲ್‌ನಲ್ಲಿ, ಹಲವರ ಅಂತರಂಗದ ಸಂದೇಹಗಳು ಮಾತಿಲ್ಲದೆ ಪರಿಹಾರಗೊಳ್ಳುತ್ತಿದ್ದವು.



ಅಡುಗೆಮನೆಯ ಕೆಲಸಗಳಿಂದ ಸ್ವಲ್ಪ ಬಿಡುವು ಸಿಕ್ಕಿದಾಗ, ಒಮ್ಮೆ ಸುಮಾರು ೧೧ ಘಂಟೆಯ ಹೊತ್ತಿಗೆ ಹಾಲ್‌ನಲ್ಲಿ ಶ್ರೀಭಗವಾನರ ಬಳಿ ನಾನು ಕುಳಿತುಕೊಂಡೆ. ಕರ್ನಾಟಕದ ಒಂದು ವಿಶ್ವವಿದ್ಯಾಲಯದ ಕೆಲವು ಮಂದಿ ಸಂದರ್ಶಕರು ಅವರೊಡನೆ ಮಾತನಾಡುತ್ತಿದ್ದರು. 'ಮೌನ'ವನ್ನು ಕುರಿತ ಅವರ ಪ್ರಶ್ನೆಗೆ ಉತ್ತರಿಸುತ್ತಾ ಭಗವಾನರು ಹೀಗೆ ಹೇಳಿದುದು ನನ್ನ ಕಿವಿಗೆ ಬಿತ್ತು: 'ಮೌನ' ಎಂದರೆ ಮಾತನಾಡದೆ ಸುಮ್ಮನೆ ಕುಳಿತುಕೊಳ್ಳುವುದಲ್ಲ. ಒಂದೇ ಚಿಂತನೆಯಲ್ಲಿ ಮನಸ್ಸನ್ನು ನೆಲೆ ನಿಲ್ಲಿಸುವುದೇ ನಿಜವಾದ 'ಮೌನ.' ಈ ರೀತಿಯ ಅನರ್ಘ್ಯ ಜ್ಞಾನರತ್ನಗಳನ್ನು ಸಂಗ್ರಹಿಸುವ ಸಲುವಾಗಿ ನಾನು ಆ ಹಾಲ್‌ಗೆ ಹೋಗಲು ಇಷ್ಟಪಡುತ್ತಿದ್ದೆ.

ಒಮ್ಮೆ ಭಗವಾನರ ಬಳಿ ಒಬ್ಬ ಬ್ರಾಹ್ಮಣ ಕೈಮುಗಿದುಕೊಂಡು ಬಹಳ ಹೊತ್ತು ನಿಂತಿದ್ದುದನ್ನು ನಾನು ಕಂಡೆ. ಬಹುಶಃ ಭಗವಾನರಿಗೆ ಆತ ಪರಿಚಿತನಿದ್ದಿರಬಹುದು. ಅವರು ಆತನನ್ನು ಗಮನಿಸದಂತೆಯೇ ಇದ್ದರು. ಕೆಲವು ಸಮಯದ ನಂತರ ಮತ್ತೆ ಕೆಲವು ಭಕ್ತರು ಆ ಹಾಲ್‌ಗೆ ಬರತೊಡಗಿದರು. ಭಗವಾನರು ಇದನ್ನು ನೋಡುತ್ತಿದ್ದಂತೆ ಆತನೊಡನೆ ಅತ್ಯಂತ ಸಂತೋಷದಿಂದ ಮಾತನಾಡಲು ಆರಂಭಿಸಿದರು. ಹೀಗೆ ಸಂದರ್ಶನದ ವೇಳೆಯಲ್ಲಿ ಭಗವಾನರು ಬೇರೆ ಬೇರೆ ಭಾವಗಳಲ್ಲಿರುತ್ತಿದ್ದುದನ್ನು ನೋಡಬಹುದಿತ್ತು. ಅವರು ಭಕ್ತರ ಅಂತರಂಗದ ಭಾವಗಳನ್ನು ಅರಿತಿರುತ್ತಿದ್ದರು ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ.

ಮಧ್ಯಾಹ್ನ ಭಗವಾನರೊಡನೆ ಎಲ್ಲ ಅತಿಥಿಗಳಿಗೂ ಊಟದ ವ್ಯವಸ್ಥೆ ಇರುತ್ತಿತ್ತು. ಅನಂತರ ವಿಶ್ರಾಂತಿಯ ಸಮಯ. ಮಧ್ಯಾಹ್ನ ಮತ್ತೆ ದರ್ಶನ ಮುಂದುವರೆಯುತ್ತಿತ್ತು. ಮಧ್ಯಾಹ್ನ ನಾಲ್ಕು ಘಂಟೆಯಿಂದ ಮರುದಿನ ಬೆಳಗಿನ ಇಡ್ಲಿಗೆ ನೆನೆಸಿದ್ದ ಬೇಳೆ, ಅಕ್ಕಿಯನ್ನು ರುಬ್ಬುವ ಕೆಲಸ ನನಗಿರುತ್ತಿತ್ತು. ಒಬ್ಬಾಕೆ ವಯಸ್ಸಾದ ಹೆಂಗಸು ನನಗೆ ಈ ಕೆಲಸದಲ್ಲಿ ಸಹಾಯ ಮಾಡುತ್ತಿದ್ದರು. ಒರಳಿನಿಂದ ಮೇಲೆ ಬಂದ ಹಿಟ್ಟನ್ನು ಅವರು ತಮ್ಮ ಬಲಗೈಯಿಂದ ಒರಳಿಗೆ ತಳ್ಳುತ್ತಿದ್ದರು. ಈ ಸೇವೆ ಮುಗಿದ ತಕ್ಷಣ ಭಗವಾನರ ದರ್ಶನಸುಖ ಅನುಭವಿಸಲು ನಾನು ಹಾಲ್‌ನತ್ತ ಹೋಗುತ್ತಿದ್ದೆ. ಒಂದು ಮಧ್ಯಾಹ್ನ ಅವರು ಯಾರೋ ಕೆಲವು ಮಂದಿ ಭಕ್ತರೊಡನೆ ಮಾತನಾಡುತ್ತಿದ್ದರು. ಆಗ ಅವರು ಸೋಫಾದ ಮೇಲೆ ಕುಳಿತಿದ್ದರು. ನಿಧಾನವಾಗಿ ತಮ್ಮ ಎರಡೂ ಕಾಲುಗಳನ್ನು ಚಾಚಿ ನೆಲಕ್ಕೆ ಬಿಟ್ಟರು. ಅವರು ತಮ್ಮ ಎಡಗೈಯಲ್ಲಿ ಊರುಗೋಲು ಹಿಡಿದಿದ್ದರು. ಬಲಗೈಯಿಂದ ಮೊಣಕಾಲುಗಳನ್ನು ನೀವಿ ಕೊಳ್ಳುತ್ತಿದ್ದರು. ಹೀಗೆ ಮಾಡುತ್ತಾ ಮೇಲೆದ್ದು ನಿಲ್ಲಲು ಪ್ರಯತ್ನಿಸುತ್ತಿದ್ದರು. ಆಗ ಅವರಿಗೆ ತಾವು ಐದು ಘಂಟೆಯವರೆಗೆ ಹೊರಗೆ ಹೋಗುವಂತಿಲ್ಲ ಎಂಬುದು ನೆನಪಾಯಿತು. ಗಡಿಯಾರದ ಕಡೆ ದೃಷ್ಟಿ ಹರಿಸಿದರು. ಆ ಸಮಯಕ್ಕೆ ಸರಿಯಾಗಿ ಗಡಿಯಾರ ಐದು ಹೊಡೆಯಿತು. ಅವರು ಮುಗುಳ್ನಕ್ಕು ಅರುಣಾಚಲ ಬೆಟ್ಟದ ಕಡೆಗೆ ನಡೆದು ಹೋದರು. ಸಂಜೆಯ ಆಹ್ನಿಕಗಳನ್ನು ಮಾಡಲು ನದಿಯ ನೀರಿನಲ್ಲಿ ಸ್ನಾನ ಮಾಡುವ ಮೊದಲು ಅವರು ಸ್ವಲ್ಪ ವ್ಯಾಯಾಮವನ್ನೂ ಮಾಡುತ್ತಿದ್ದರು. ನಾವು ಅವರನ್ನು ಸ್ವಲ್ಪ ದೂರದವರೆಗೆ ಹಿಂಬಾಲಿಸಿದೆವು, ಬಳಿಕ ಅವರು ತಮ್ಮ ಸೇವಕನೊಡನೆ ಮುಂದೆ ನಡೆದರು.

ಸಾಧು ಅರುಣಾಚಲರು (Major A. W. Chadwick) ಲೈಬ್ರರಿಯ ಬೀರುವಿಗೆ ಒರಗಿಕೊಂಡು, ತನ್ನ ಸೊಂಟ ಮತ್ತು ಕಾಲುಗಳಿಗೆ ಬೆಲ್ಟು ಹಾಕಿಕೊಂಡು ಕುಳಿತು ಧ್ಯಾನ ಮಾಡುತ್ತಿದ್ದರು. ಇತರ ಭಕ್ತರಂತೆ ಧ್ಯಾನ ಮಾಡುವಾಗ ತಾವೂ ಪದ್ಮಾಸನ ಹಾಕಿ ಕುಳಿತುಕೊಳ್ಳುವ ಅಭ್ಯಾಸವನ್ನು ಅವರು ಮಾಡುತ್ತಿದ್ದರು. ಏಚಮ್ಮಾಳಮ್ಮ ಎಂಬ ಭಕ್ತೆಯೂ ಆ ಹಾಲ್‌ನಲ್ಲಿ ಮೌನವಾಗಿ ಕುಳಿತು ಪ್ರಾರ್ಥಿಸುತ್ತಿದ್ದರು. ತನ್ನ ಗಂಡ ಮತ್ತು ಇಬ್ಬರು ಮಕ್ಕಳನ್ನು ಸ್ವಲ್ಪವೇ ಕಾಲಾಂತರದಲ್ಲಿ ಕಳೆದುಕೊಂಡಿದ್ದ ಆಕೆ ಭಗವಾನರ ಬಳಿ ಶಾಂತಿ, ಸಮಾಧಾನ ಪಡೆಯುವ ಸಲುವಾಗಿ ಬಂದಿದ್ದರು. ಅವರ ಕೃಪೆಯಿಂದ ಆಕೆ ಬೇಗನೆ ಶಾಂತಿ, ಸಮಾಧಾನಗಳನ್ನು ಹೊಂದಿ ಸಾಮಾನ್ಯ ಸ್ಥಿತಿಗೆ ಬಂದರು. ಈ ರೀತಿ ಆಧ್ಯಾತ್ಮಿಕ ಸೌಖ್ಯವನ್ನು ಪಡೆದ ಅನೇಕ ಭಾಗ್ಯವಂತರು ದೈವದ ಸಂಗಾತಿಗಳಾಗಿ ಆಶ್ರಮ ದಲ್ಲಿದ್ದರು.

ಸೂರ್ಯಾಸ್ತದ ವೇಳೆ ಸಂಜೆಯ ಪ್ರಾರ್ಥನೆ ಮತ್ತು ಧ್ಯಾನದ ಅವಧಿ ಆರಂಭವಾಗುತ್ತಿತ್ತು. ಆಗಲೂ ಬೆಳಗಿನಂತೆ ವೇದಮಂತ್ರ ಪಾರಾಯಣ, ಭಜನೆ, ನಾಮಸಂಕೀರ್ತನೆ, ಪ್ರಾರ್ಥನೆ, ಧ್ಯಾನ ಇರುತ್ತಿತ್ತು. ಸಂಜೆಯ ಕೊನೆಯ ಕಾರ್ಯ ಕ್ರಮ 'ಮೌನಸಮಾಗಮ.' ಭಗವಾನರ ಸನ್ನಿಧಿಯಲ್ಲಿ ಎಲ್ಲರೂ ಧ್ಯಾನ ಮಾಡುತ್ತಿದ್ದರು. ಅವರು ಮಹಾದೇವ ಶಿವ ನಂತೆ ಸಂಪೂರ್ಣ ಧ್ಯಾನಸಮಾಧಿಯಲ್ಲಿ ಮಗ್ನರಾಗಿ ತಮ್ಮ ಆಸನದಲ್ಲಿ ಕುಳಿತಿರುತ್ತಿದ್ದರು.

ಒಮ್ಮೆ ಇಂತಹ ಸಮಯದಲ್ಲಿ ಆಶ್ರಮದ ಆಡಳಿತ ಮಂಡಳಿಯ ಸೇವಕರೊಬ್ಬರು ಭಗವಾನರ ಸೋಫಾದ ಬಳಿ ಬಂದು 'ಭಗವಾನ್, ಭಗವಾನ್, ಭಗವಾನ್' ಎಂದು ಪ್ರತಿಸಲವೂ ದನಿ ಏರಿಸುತ್ತಾ ಕೂಗತೊಡಗಿದರು. ಮೊದ ಮೊದಲು ಭಗವಾನರಿಗೆ ಇವರ ಕೂಗು ಕೇಳಿಸಲೇ ಇಲ್ಲ, ಅವರು ಸಂಪೂರ್ಣ ದೈವಿಕವಾದ ಮೌನ, ಶಾಂತಿ, ಆನಂದದಲ್ಲಿ ಲೀನವಾಗಿದ್ದರು. ಸೇವಕನ ಧ್ವನಿ ಬಹಳ ಜೋರಾಗಿದ್ದುದರಿಂದ ಭಗವಾನರು ತಮ್ಮ ಮಾಮೂಲು ಸ್ಥಿತಿಗೆ ಬಂದು ತಮಿಳಿನಲ್ಲಿ 'ಎನ್ನ, ಎನ್ನ?' (ಏನು? ಏನು?) ಎಂದು ಕೇಳಿದರು. ಇಂತಹ ಘಟನೆಗಳನ್ನು ಕಾಣುವ, ಅನುಭವಿಸುವ ಅವಕಾಶ ನಮಗೆ ದಿನದಲ್ಲಿ ಅನೇಕ ಸಲ ಸಿಗುತ್ತಿತ್ತು. ಅವರು ವಿಭಿನ್ನ ಭಾವಗಳ, ಮನೋಧರ್ಮಗಳ ನಾನಾ ಬಗೆಯ ಜನರೊಡನೆ ವ್ಯವಹರಿಸುತ್ತಿದ್ದರೂ, ಅವರ ಮುಖದ ಮೇಲೆ ಯಾವುದೇ ಆಯಾಸದ ಚಿಹ್ನೆ ಇರುತ್ತಿರಲಿಲ್ಲ. ಅವರು ಆಕಳಿಸಿದ್ದನ್ನು ನಾನೆಂದೂ ನೋಡಿಲ್ಲ. ಅವರು ನಿರಂತರ ಸತ್-ಚಿತ್-ಆನಂದದ ಅನುಭವದಲ್ಲೇ ಮುಳುಗಿರುವಂತೆ ಕಾಣುತ್ತಿದ್ದರು.

**ಶ್ರೀರಮಣರು ನನ್ನನ್ನು ಶ್ರೀರಾಮಕೃಷ್ಣರಿಗೆ ಹಸ್ತಾಂತರಿಸಿದರು :** ಮೇಲಿನ ಉಪಶೀರ್ಷಿಕೆ ಸೂಚಿಸಿರುವಂತೆ, ನನ್ನ ಬದುಕಿನಲ್ಲಿ ಇದು ಒಂದು ತಿರುವಿನ ಸಂದರ್ಭ. ರಮಣಾಶ್ರಮದ ನನ್ನ ಬದುಕನ್ನು ನಾನು ಸುಖವಾಗಿ ಅನುಭವಿಸುತ್ತಿದ್ದೆ. ಅಡುಗೆ ಮನೆಯ ಕೆಲಸಗಳು ಮುಗಿದು ಬಿಡುವು ದೊರೆತಾಗಲೆಲ್ಲ ಶ್ರೀ ಭಗವಾನರ ದರ್ಶನ ನನಗೆ ದೊರಕುತ್ತಿತ್ತು. ಮಧ್ಯಾಹ್ನದ ಊಟ ಆದ ಮೇಲೆ ಅಡುಗೆಮನೆಯನ್ನು ಕೋತಿಗಳು ಪ್ರವೇಶಿಸದಂತೆ ಕೋಲು ಹಿಡಿದು ಕಾಯುತ್ತಿದ್ದಾಗ ಪವಿತ್ರ ಗ್ರಂಥಗಳನ್ನು ಓದುವ ಅವಕಾಶವೂ ನನಗೆ ದೊರಕುತ್ತಿತ್ತು. ನಾನು ಆ ಪುಸ್ತಕಗಳನ್ನು ಗ್ರಂಥಾಲಯದಿಂದ ಪಡೆದು ಕೊಳ್ಳುತ್ತಿದ್ದೆ. (ದೇಣಿಗೆ, ಕಾಣಿಕೆಗಳು ದೊರೆತಾಗ ಒಳ್ಳೆಯ ಅಡುಗೆಮನೆಯನ್ನು ಕಟ್ಟಿಸಲಾಯಿತು.) ಹಾಗೆ ನಾನು ಓದಿದ ಗ್ರಂಥಗಳಲ್ಲಿ ಮಹಾತ್ಮಾ ಗಾಂಧಿ ಮುನ್ನುಡಿ ಬರೆದ 'ಶ್ರೀರಾಮಕೃಷ್ಣರ ಜೀವನ' (Life of Sri Ramakrishna) ಎಂಬ ಗ್ರಂಥ ನನ್ನ ಮೇಲೆ ವಿಶೇಷ ಪ್ರಭಾವ ಬೀರಿತು. ಇದೇ ಮೊದಲ ಬಾರಿಗೆ ಶ್ರೀರಾಮಕೃಷ್ಣರ ಪವಿತ್ರ, ಅದ್ಭುತ, ಪ್ರಭಾವೀ ಹಾಗೂ ಸ್ಫೂರ್ತಿದಾಯಕ ಜೀವನವನ್ನು ಅರಿಯುವ ಅವಕಾಶ ನನಗೆ ಲಭಿಸಿತು. ಆ ಗ್ರಂಥ ಶ್ರೀಮಾತೆ

ಶಾರದಾದೇವಿ, ಸ್ವಾಮಿ ವಿವೇಕಾನಂದ, ಶ್ರೀರಾಮಕೃಷ್ಣರ ಸಂನ್ಯಾಸೀ ಶಿಷ್ಯರು ಮತ್ತು ಗೃಹೀಭಕ್ತರು ಎಲ್ಲರನ್ನೂ ಪರಿಚಯಿಸಿತ್ತು. ಹೀಗೆ ಶ್ರೀರಮಣಾಶ್ರಮದಲ್ಲಿ ವಾಸಿಸುತ್ತಿದ್ದಾಗ ಮೊಟ್ಟಮೊದಲ ಬಾರಿಗೆ ಕೊಲ್ಕತ್ತಾದ ಬೇಲೂರು ಮಠದಲ್ಲಿ ಪ್ರಧಾನ ಕೇಂದ್ರವಾಗಿರುವ ಶ್ರೀರಾಮಕೃಷ್ಣ ಮಹಾಸಂಘವನ್ನು ಕುರಿತು ತಿಳಿದೆ.

ಒಂದು ದಿನ ಅಡುಗೆಮನೆಯಲ್ಲಿ ನಾನು ಈ ಪುಸ್ತಕವನ್ನು ಓದುತ್ತಿದ್ದಾಗ ನನ್ನೆದುರಿನಲ್ಲಿ ನಿಂತಿದ್ದ ನನ್ನ ಮಾವನನ್ನು ಕಂಡು ಬೆಚ್ಚಿದೆ. ನನ್ನನ್ನು ಮನೆಗೆ ಕರೆದುಕೊಂಡು ಹೋಗುವುಕ್ಕಾಗಿ ಅವರು ಮದ್ರಾಸಿನಿಂದ ತಮ್ಮ ಕಾರಿನಲ್ಲೇ ಬಂದಿದ್ದರು. ಆಶ್ರಮದಲ್ಲೇ ಇರಬೇಕೆಂಬ ನನ್ನ ಬಯಕೆಯನ್ನು ನಾನು ಅವರಿಗೆ ತಿಳಿಸಿದಾಗ ಅವರು ಕೋಪಿಸಿಕೊಂಡರು; ಪ್ರಯಾಣಕ್ಕೆ ಬೇಗನೆ ಸಿದ್ಧವಾಗಬೇಕೆಂದು ಆದೇಶಿಸಿದರು.

ಆ ಘಳಿಗೆಯಲ್ಲಿ ಆಶ್ರಮದಿಂದ ತಪ್ಪಿಸಿಕೊಂಡು ಓಡಿ ಹೋಗಿ, ಅರುಣಾಚಲದ ಬೆಟ್ಟದಲ್ಲಿ ತಲೆಮರೆಸಿಕೊಂಡು ಯಾರ ಹಂಗೂ ಇಲ್ಲದೆ ಸ್ವಂತ ಜೀವನ ನಡೆಸಬೇಕೆಂಬ ಆಲೋಚನೆ ನನ್ನ ತಲೆಗೆ ಬಂತು. ಒಳಗೆ ಹೋಗಿ ನನ್ನ ಬಟ್ಟೆಯನ್ನು ತೆಗೆದುಕೊಂಡು, ಎರಡು ಘಂಟೆಯ ವೇಳೆಗೆ ಅರುಣಾಚಲದ ಬೆಟ್ಟದ ಕಡೆಗೆ ಹೊರಟುಬಿಟ್ಟೆ. ನನ್ನನ್ನು ಹುಡುಕಿಕೊಂಡು ಬರುವವರ ಕೈಗೆ ಸಿಗಬಾರದೆಂದು, ಎಲ್ಲರೂ ನಡೆಯುವ ಹಾದಿಯನ್ನು ಬಿಟ್ಟು ಕಾಡುದಾರಿಯಲ್ಲಿ, ಗಿಡಮರಗಳ ನಡುವೆ ನುಸುಳುತ್ತಾ ಸಾಗಿದೆ. ಶ್ರೀಭಗವಾನರು ಇರುತ್ತಿದ್ದ ಸ್ಕಂದಾಶ್ರಮ ಮೊದಲಾದ ಜಾಗಗಳನ್ನು ಉದ್ದೇಶಪೂರ್ವಕವಾಗಿ ದೂರವಿಟ್ಟೆ. ನನ್ನ ಮಾವ ಈ ಜಾಗಗಳಲ್ಲೆಲ್ಲಾ ನನಗಾಗಿ ಹುಡುಕಾಡಿದರು ಎಂದು ನನಗೆ ಆಮೇಲೆ ತಿಳಿಯಿತು. ಅವರು ನನ್ನನ್ನು ಕಾಣದೆ ಇದ್ದುದರಿಂದ, ರಮಣಾಶ್ರಮದ ಜನರಿಗೆ ನನ್ನ ತಾಯಿ ಉಪವಾಸ, ವನವಾಸಗಳನ್ನು ಮಾಡುತ್ತಾ ದೇವರ ಮುಂದೆ ಕಣ್ಣೀರಿಡುತ್ತಾ ನಾನು ಮನೆಗೆ ಹಿಂತಿರುಗಿ ಬರುವಂತೆ ಪ್ರಾರ್ಥಿಸುತ್ತಿರುವಳೆಂದು ಹೇಳಿದರು. ಅನಂತರ ಅವರು ಖಾಲಿ ಕೈಯಲ್ಲಿ ಹಿಂತಿರುಗಿ ಹೋದರು.

ಆ ಸಂಜೆ ನಾನು ಬೆಟ್ಟದಿಂದ ಕೆಳಗಿಳಿದು ಬಂದು ಹಳೆಯ ದೇವಾಲಯದ ಪ್ರಾಂಗಣದಲ್ಲಿ ಮಲಗಿದೆ. ನನಗೆ ತಿನ್ನಲು, ಕುಡಿಯಲು ಅಂದು ಏನೂ ಇರಲಿಲ್ಲ. ಮರುದಿನ ಸ್ನಾನ ಮಾಡಿ ಅರುಣಾಚಲೇಶ್ವರ ದೇವಾಲಯಕ್ಕೆ ಹೋದೆ. ಅಲ್ಲಿ ಅವರು ಅತಿಥಿಗಳಿಗೆ ಪ್ರಸಾದವನ್ನು ಕೊಡುತ್ತಾರೆ. ಅದನ್ನು ಸೇವಿಸಿದ ಮೇಲೆ ಅಲ್ಲಿನ ಅರ್ಚಕರೊಬ್ಬರೊಡನೆ ಮಾತನಾಡಿದೆ. ಅವರು ನನಗೆ ದೇವಾಲಯದ ಸೇವೆ ಏನಾದರೂ ಮಾಡಿಕೊಂಡು ಮೂರು ದಿನ ಅಲ್ಲಿರಲು ಅವಕಾಶ ಮಾಡಿಕೊಟ್ಟರು. ಎಲ್ಲ ದೇವರಿಗೂ ಶ್ರೀಗಂಧ ತೇಯುವುದು ನನ್ನ ಒಂದು ಕೆಲಸವಾಗಿತ್ತು. ಆಗ ರಮಣಾಶ್ರಮದ ಜನರಿಗೆ ನಾನು ಅರುಣಾಚಲೇಶ್ವರ ದೇವಸ್ಥಾನದಲ್ಲಿ ಇರುವ ಸುದ್ದಿ ತಿಳಿಯಿತು. ಅವರು ನನ್ನನ್ನು ಆಶ್ರಮಕ್ಕೆ ಹಿಂತಿರುಗಲು ಹೇಳಿದರು. ನನ್ನ ತಾಯಿ ಕಣ್ಣೀರಿಡುತ್ತಾ ಪ್ರಾರ್ಥಿಸುತ್ತಿದ್ದ ವಿಚಾರವನ್ನು ಹೇಳಿ, ಮನೆಗೆ ಹೋಗಬೇಕೆಂದು ಅವರು ನನ್ನನ್ನು ಒತ್ತಾಯಿಸಿದರು. ಮನೆಗೆ ಹೋಗಿ ತಾಯಿಗೆ ಮುಖತೋರಿಸಿ, ಅವರನ್ನು ಸಮಾಧಾನಪಡಿಸಿ ಮತ್ತೆ ರಮಣಾಶ್ರಮಕ್ಕೆ ಹಿಂತಿರುಗಿ ಬಾ ಎಂದು ಹೇಳಿದರು. ಇದಕ್ಕೆ ಒಪ್ಪಿಕೊಂಡು ಮದ್ರಾಸಿನಲ್ಲಿ ನನ್ನ ತಾಯಿ ಇದ್ದ ಮನೆಗೆ ಹೋದೆ. ಆದರೆ ಆಧ್ಯಾತ್ಮಿಕ ಬದುಕನ್ನು ಅಷ್ಟು ಗಂಭೀರವಾಗಿ ತೆಗೆದುಕೊಳ್ಳದ ನನ್ನ ಬಂಧುಗಳು, ನಾನು ಅಧ್ಯಯನವನ್ನು ಮುಂದುವರಿಸಬೇಕೆಂದು ಒತ್ತಾಯಪಡಿಸಿದರು. ಮನಸ್ಸಿಲ್ಲದ ಮನಸ್ಸಿನಿಂದ ಇಂಜಿನಿಯರಿಂಗ್ ಸಂಸ್ಥೆಯೊಂದರಲ್ಲಿ ಐದು ವರ್ಷದ ಒಂದು ಕೋರ್ಸಿಗೆ ಸೇರಲು ನಾನು ಸಮ್ಮತಿಸಿದೆ.

ನನ್ನ ಅದೃಷ್ಟಕ್ಕೆ ನಮ್ಮ ಮದ್ರಾಸಿನ ಮನೆ ಮೈಲಾಪುರದ ರಾಮಕೃಷ್ಣ ಮಠಕ್ಕೆ ಬಹಳ ಹತ್ತಿರದಲ್ಲೇ ಇತ್ತು. ನಾನು ಪ್ರತಿದಿನ ದೇವಾಲಯಕ್ಕೆ ಹೋಗಿ ಅಲ್ಲಿನ ಸಾಧುಗಳು ಹಾಗೂ ಬ್ರಹ್ಮಚಾರಿಗಳೊಡನೆ ಆಧ್ಯಾತ್ಮಿಕ ವಿಷಯಗಳನ್ನು ಕುರಿತು ಮಾತನಾಡುತ್ತಿದ್ದೆ. ಒಂದು ದಿನ ನಾನು ಸ್ವಾಮಿ ವಿವೇಕಾನಂದರ ಕೃತಿಯೊಂದನ್ನು ಓದುತ್ತಿದ್ದೆ. ಅದರಲ್ಲಿ ಒಂದು ಭಾಗ ನನ್ನ ಮನಸೆಳೆಯಿತು. ಅದರಲ್ಲಿ ಸ್ವಾಮೀಜಿ ಹೀಗೆ ಹೇಳಿದ್ದಾರೆ: 'ನೀವು ನಿಮ್ಮ ಕುಟುಂಬ ಮತ್ತು ಭೌತಿಕ ಸುಖಭೋಗಗಳ ಅನುಭವಕ್ಕಾಗಿ ಬೇಕಾದಷ್ಟು ಜನ್ಮಗಳನ್ನು ವಿನಿಯೋಗಿಸಿದ್ದೀರಿ. ಕಡೇಪಕ್ಷ ಈ ಒಂದು ಜನ್ಮವನ್ನು ನೀವು ದೇವರಿಗೆ ಮುಡಿಪಾಗಿ ಇಡಲಾರಿರಾ?' ತಕ್ಷಣ ನನ್ನ ಅಂತರಂಗದ ಧ್ವನಿ ಕೂಗಿ ಹೇಳಿತು: 'ಹೌದು, ನಾನು ಅದನ್ನು ಮಾಡಬಲ್ಲೆ!' ಈ ವಿಚಾರ ನನ್ನಲ್ಲಿ ಎಂತಹ ಸ್ಫೂರ್ತಿಯನ್ನು ನೀಡಿತೆಂದರೆ, ನಾನು ಅಲ್ಲೇ, ಆಗಲೇ ನನ್ನ ಜೀವನವನ್ನು ಶ್ರೀರಾಮಕೃಷ್ಣರಿಗೆ ಸಮರ್ಪಣೆ ಮಾಡುವ ದೃಢ ನಿರ್ಧಾರವನ್ನು ಕೈಗೊಂಡೆ. ನನ್ನ ಬಂಧುವರ್ಗ ಬಯಸಿದಂತೆ ೧೦-೨೦ ವರ್ಷಗಳ ಕಾಲ ಓದಿ, ದುಡಿಯುವ ನಿರ್ಣಯವನ್ನು ಕೈಬಿಟ್ಟೆ.

ಪೂಜ್ಯ ಸ್ವಾಮಿ ಅಶೇಷಾನಂದಜಿ ಮಹಾರಾಜ್ ಅವರು ಆಗ ಮದ್ರಾಸ್‌ನ 'ರಾಮಕೃಷ್ಣ ಮಿಷನ್ ಸ್ಟೂಡೆಂಟ್ಸ್ ಹೋಮ್'ನ ನಿಲಯಪಾಲಕರಾಗಿದ್ದರು. ಅವರಿಗೆ ನಾನು ನನ್ನ ನಿರ್ಣಯವನ್ನು ತಿಳಿಸಿದೆ. ಅವರನ್ನು ನಾನು ಆಗಾಗ್ಗೆ ಭೇಟಿಯಾಗುತ್ತಿದ್ದೆ. ಅವರು ನನಗೆ ಅನೇಕ ರೀತಿಯಲ್ಲಿ ಮಾರ್ಗದರ್ಶಕರೂ ಆದರ್ಶಪ್ರಾಯರೂ ಆಗಿದ್ದರು. ಅವರು ಬೆಂಗಳೂರು ರಾಮಕೃಷ್ಣ ಆಶ್ರಮದ ಪೂಜ್ಯ ಸ್ವಾಮಿ ತ್ಯಾಗೀಶಾನಂದಜಿ ಅವರಿಗೆ ಪರಿಚಯಾತ್ಮಕ ಪತ್ರವೊಂದನ್ನು ಬರೆದುಕೊಟ್ಟರು. ಹೀಗೆ ನಾನು ೧೯೪೦ರಲ್ಲಿ ಮತ್ತೆ ಮನೆಯಿಂದ ಓಡಿಹೋಗಬೇಕಾಯಿತು. ಆದರೆ ಈ ಬಾರಿ ನಾನು ಹೋದದ್ದು ಶ್ರೀರಾಮಕೃಷ್ಣ ಮಿಷನ್ನಿನ ಬೆಂಗಳೂರು ಆಶ್ರಮಕ್ಕೆ.

**ಭಗವಾನ್ ಶ್ರೀರಮಣರ ಅಂತಿಮ ದರ್ಶನ** : ನಾನು ಬೆಂಗಳೂರು ಆಶ್ರಮದಲ್ಲಿ ಆರು ವರ್ಷಗಳ ಕಾಲ ಇದ್ದೆ. ಅಲ್ಲಿ ಸಂಘದ ನಿಯಮಾವಳಿಗಳಿಗೆ ಬದ್ಧನಾಗಿ ಪ್ರಾರ್ಥನೆ, ಧ್ಯಾನ, ಸೇವೆ ಮೊದಲಾದ ಎಲ್ಲವನ್ನೂ ಪಾಲಿಸುತ್ತಿದ್ದೆ. ಸಂಸ್ಕೃತ ಹಾಗೂ ಶಾಸ್ತ್ರಗ್ರಂಥಗಳ ಅಧ್ಯಯನವನ್ನೂ ಮಾಡಿದೆ. ೧೯೫೦ರಲ್ಲಿ ಕೊಲ್ಕತ್ತಾದ ಬೇಲೂರು ಮಠದಲ್ಲಿರುವ ನಮ್ಮ ಪ್ರಧಾನ ಕೇಂದ್ರಕ್ಕೆ ದೀಕ್ಷೆಗಾಗಿ ನಾನು ಹೊರಡಬೇಕಾಗಿದ್ದ ಸಮಯ ಹತ್ತಿರವಾಗಿತ್ತು. ಶ್ರೀಮಾತೆ ಶಾರದಾದೇವಿಯವರ ನೇರ ಶಿಷ್ಯರಾದ, ಸಂಘದ ಆಗಿನ ಅಧ್ಯಕ್ಷರಾಗಿದ್ದ ಪೂಜ್ಯ ಸ್ವಾಮಿ ವಿರಜಾನಂದಜಿ ಮಹಾರಾಜ್ ಅವರಿಂದ ನಾನು ಪವಿತ್ರ ಮಂತ್ರದೀಕ್ಷೆ ಸ್ವೀಕರಿಸುವವನಾಗಿದ್ದೆ. ಅಷ್ಟೇ ಅಲ್ಲದೆ, ಬೇರೊಂದು ಬಗೆಯ ಸಾಂಪ್ರದಾಯಿಕ ಆಚರಣೆಯ ಮೂಲಕ ನಾನು ನನ್ನನ್ನು ಪವಿತ್ರ ಬ್ರಹ್ಮಚರ್ಯ ಜೀವನಕ್ಕೆ ಸಮರ್ಪಿಸಿಕೊಳ್ಳುವವನಿದ್ದೆ.

ಮಿಷನ್‌ಗೆ ಹೋಗುವ ಮಾರ್ಗದಲ್ಲಿ ಶ್ರೀರಮಣಾಶ್ರಮಕ್ಕೆ ಮತ್ತೊಮ್ಮೆ ಭೇಟಿ ಕೊಡುವುದು ಉಚಿತವೆಂದು ನನಗನ್ನಿಸಿತು. ಶ್ರೀರಮಣರು ಶರೀರ ತ್ಯಜಿಸುವ ಮುನ್ನ ಅವರ ದರ್ಶನ ಪಡೆಯುವುದು ಒಳ್ಳೆಯದೆಂದೂ ನನಗನ್ನಿಸಿತು. ೧೯೫೦ರ ಫೆಬ್ರವರಿ ೧೭ರಂದು ನಾನು ರಮಣಾಶ್ರಮವನ್ನು ತಲುಪಿದೆ. ನನ್ನೊಡನೆ ಬೆಂಗಳೂರಿನ ಇನ್ನಿಬ್ಬರು ಭಕ್ತರೂ ಇದ್ದರು. ನಾವು ಅಲ್ಲಿ ಮೂರು ದಿನ ಇದ್ದೆವು. ಮೊದಲ ದಿನ ಇತರ ಸಂದರ್ಶಕ ಭಕ್ತರೊಡನೆ ನಾನು ಊಟಕ್ಕೆ ನೆಲದ ಮೇಲೆ ಕುಳಿತೆ. ಶ್ರೀಭಗವಾನರು ಆ ಪಂಕ್ತಿಯಲ್ಲಿ ಮೊದಲನೆಯವರಾಗಿದ್ದರು. ಬಡಿಸಲು ಮೊದಲು ಬಂದವರು 'ಕೀರೈ ಪಾಟಿ' (ಸೊಪ್ಪಿನ ಅಜ್ಜಿ) ಇರಬೇಕು, ಅವರು ತಾವು ಮಾಡಿದ ಅಡುಗೆ ಪದಾರ್ಥವನ್ನು ಬಡಿಸಿದರು. ಸುಮಾರು ತೊಂಬತ್ತು ವರ್ಷ ವಯಸ್ಸಿನ ಅವರನ್ನು ಶ್ರೀಭಗವಾನರು ತಮಿಳಿನಲ್ಲಿ 'ಎನ್ನ ಕೊಂಡುವಂದಿರ್ಕೆ' (ಏನು ತಂದಿದ್ದೀಯೆ?) ಎಂದು ಏರಿದ ಧ್ವನಿಯಲ್ಲಿ ಕೇಳಿದರು. ಆಕೆ ತಾನು ಮಾಡಿದ ಪದಾರ್ಥಗಳು ಯಾವುದೆಂದು ಹೇಳಿದರು. ಆಮೇಲೆ ಆಕೆ ಮೆಲ್ಲನೆ ಆ ಆಹಾರವನ್ನು ಸ್ವಲ್ಪ ಸ್ವಲ್ಪವೇ ಎಲ್ಲ ಭಕ್ತರಿಗೂ ಬಡಿಸಿದರು.

ಶ್ರೀರಮಣರು ಊಟ ಮಾಡುತ್ತಿದ್ದುದನ್ನು ನಾನು ನೋಡುತ್ತಿದ್ದೆ. ಅವರು ಎಲೆಯಲ್ಲಿ ಬಡಿಸಿದ್ದ ಪಲ್ಯದಿಂದ ಮೆಣಸಿನಕಾಯಿ ಚೂರುಗಳನ್ನು ಆರಿಸಿ, ಬಾಳೆಯ ಎಲೆಯ ತುದಿಗೆ ತಳ್ಳಿದರು. ಆ ಮೆಣಸಿನಕಾಯಿ ಚೂರುಗಳಿಗೆ ಒಂದೆರಡು ಅನ್ನದ ಅಗುಳು ಅಂಟಿಕೊಂಡಿದ್ದವು. ಅವನ್ನು ಅವರು ಬಹಳ ಎಚ್ಚರಿಕೆಯಿಂದ ಆರಿಸಿ ತೆಗೆದು, ತಮ್ಮ ಊಟದ ಜೊತೆ ಬೆರೆಸಿಕೊಂಡರು. ಅದನ್ನೂ ಅವರು ವ್ಯರ್ಥಮಾಡಲು ಇಷ್ಟಪಡುತ್ತಿರಲಿಲ್ಲ. ಊಟ ಮುಗಿದಾಗ ಅವರ ಎಲೆ ಸ್ವಚ್ಛವಾಗಿತ್ತು, ಕೊನೆಯಲ್ಲಿ ಬಿಟ್ಟ ಮೆಣಸಿನಕಾಯಿ ಚೂರು ಹೊರತಾಗಿ.

ಊಟವಾದ ಮೇಲೆ ಶ್ರೀಭಗವಾನರು ತಾವು ಸಾಮಾನ್ಯವಾಗಿ ದರ್ಶನ ಕೊಡಲು ಕುಳಿತುಕೊಳ್ಳುತ್ತಿದ್ದ ಸೋಫಾದ ಕಡೆಗೆ ನಡೆದರು. ನಾನು ತಕ್ಷಣ ಅವರನ್ನು ಹಿಂಬಾಲಿಸಿ ಹೋದೆ. ಅವರು ಸೋಫಾ ತಲುಪುವ ವೇಳೆಗೆ ನಾನು ಅವರ ಬಳಿಗೆ ಹೋಗಿ ನಮಸ್ಕರಿಸಿದೆ. ಅತ್ಯಂತ ಸುಲಭವಾದ ಮಾರ್ಗವೇನೆಂಬುದನ್ನು ತೋರಬೇಕೆಂದು ಅವರಲ್ಲಿ ಇಂಗ್ಲಿಷ್ ಭಾಷೆಯಲ್ಲಿ ಪ್ರಾರ್ಥಿಸಿದೆ. ಶ್ರೀಭಗವಾನರಿಗೆ ಇಂಗ್ಲಿಷ್ ಗೊತ್ತಿದ್ದರೂ ಅವರು ಸಾಧಾರಣವಾಗಿ ತಮಿಳು ಭಾಷೆಯಲ್ಲೇ ಮಾತನಾಡುತ್ತಿದ್ದರು. ಅವರು ಸುಮ್ಮನೆ ನನ್ನ ಕಡೆ ನೋಡಿ ಕುಳಿತುಕೊಳ್ಳುವಂತೆ ಸಂಜ್ಞೆ ಮಾಡಿದರು. ಅವರ ಮುಂದೆ ನೆಲದ ಮೇಲೆ ಕುಳಿತೆ. ಆಮೇಲೆ ಬಂದ ಭಕ್ತರನ್ನೂ ಶ್ರೀಭಗವಾನರು ಗಮನಿಸುತ್ತಿದ್ದರು. ಎಲ್ಲರೂ ಬಂದು ಕುಳಿತರು. ಆ ಹಾಲ್ ತುಂಬಿಹೋಯಿತು. ಅವರು ನನ್ನ ಪ್ರಶ್ನೆಗೆ ಉತ್ತರಿಸಲಿಲ್ಲವೆಂಬ ನಿರಾಶೆಯಿಂದ ನಾನು ಕಣ್ಣು ಮುಚ್ಚಿಕೊಂಡು ಮನಸ್ಸಿನಲ್ಲಿಯೇ ಮಂತ್ರಜಪ ಮಾಡತೊಡಗಿದೆ. ಸ್ವಲ್ಪ ಹೊತ್ತಾದ ಮೇಲೆ ಅವರಿಗೆ ಪರಿಚಿತರಾಗಿದ್ದ ಒಬ್ಬ ಪ್ರಾಧ್ಯಾಪಕರಿಗೆ, "ಈ ಹುಡುಗ ಹತ್ತಿರದ ದಾರಿಯನ್ನು ತಿಳಿಯಬಯಸುತ್ತಿದ್ದಾನೆ" ಎಂದು ಹೇಳಿದುದು ನನಗೆ ಕೇಳಿಸಿತು. ಭಗವಾನರು ಮುಂದುವರೆಸಿ, "ಸಮೀಪದ ದಾರಿ ಎಲ್ಲಿಗೆ?" ಎಂದರು.

ನನ್ನ ಪಕ್ಕಕ್ಕೆ ಕುಳಿತಿದ್ದ ನನ್ನ ಸ್ನೇಹಿತರೊಬ್ಬರು ನನ್ನ ಕಾಲನ್ನು ತಿವಿದು ಭಗವಾನರು ನನಗೇ ಹೇಳುತ್ತಿರುವರೆಂದು ಸೂಚಿಸಿದರು. ನಾನು ಕಣ್ಣು ತೆರೆದೆ. ಅವರು ನನ್ನೆಡೆಗೆ ಮುಗುಳ್ನಗೆ ಬೀರುತ್ತಿರುವುದನ್ನು ಕಂಡೆ. ಅವರು ಇತರ ಭಕ್ತರೂ ಬಂದು ಸೇರುವುದಕ್ಕಷ್ಟೇ ಕಾಯುತ್ತಿದ್ದರು. ನನ್ನ ಪ್ರಶ್ನೆಗೆ ಕೊಡುವ ಉತ್ತರದಿಂದ ಎಲ್ಲರೂ ಪ್ರಯೋಜನ ಪಡೆಯಲಿ ಎಂಬುದು ಅವರ ಉದ್ದೇಶವಾಗಿತ್ತು. ನಾನು ಅವರನ್ನು ಕೇಳಿದೆ, ಆತ್ಮದರ್ಶನಕ್ಕೆ ಸಮೀಪದ ದಾರಿ ಯಾವುದು? ಎಂದು. ನಾನು ಈಗ ಯಾವ ಮಾರ್ಗವನ್ನು ಅನುಸರಿಸುತ್ತಿರುವೆನೆಂದು ಅವರು ಕೇಳಿದರು. ನಾನು ವಿನಯದಿಂದ, 'ಜಪಸಾಧನೆ ಮಾಡುತ್ತಿರುವೆ' ಎಂದೆ. ಇದನ್ನು ಕೇಳಿ ಶ್ರೀಭಗವಾನರು, 'ಆಧ್ಯಾತ್ಮಿಕ ಬದುಕಿನಲ್ಲಿ ಅಭಿವೃದ್ಧಿ ಹೊಂದಲು ಜಪಸಾಧನೆ ಅತ್ಯಂತ ಸರಳವೂ, ನೇರವೂ ಆದ ಅತ್ಯುತ್ತಮ ವಿಧಾನ' ಎಂದು ಹೇಳಿ ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಹೇಳಿದ **'ಯಜ್ಞಾನಾಂ ಜಪಯಜ್ಞೋಽಸ್ಮಿ'** (೧೦.೨೫) ಎಂಬ ಮಾತನ್ನು ಉದ್ಧರಿಸಿದರು.

ಅವರು ಇನ್ನಷ್ಟು ವಿಸ್ತರಿಸುತ್ತ ಹೇಳಿದರು: ಪರಮಾತ್ಮನಿಗೆ ತಮ್ಮನ್ನು ತಾವು ಅರ್ಪಿಸಿಕೊಳ್ಳಲು ಇರುವ ಅತ್ಯುತ್ತಮ ಅತಿ ಸುಲಭ ವಿಧಾನ, ತನಗೆ ಅತ್ಯಂತ ಪ್ರೀತಿಪಾತ್ರನಾದ ದೇವರ ನಾಮವನ್ನು ಜಪಿಸುವುದು. ಅಂತರಂಗದ ಜ್ಯೋತಿ ಬೆಳಗಲು, ಪ್ರೇಮಪೂರ್ವಕ ಪ್ರಾರ್ಥನೆ ನಿರಂತರವಾಗಲು ಜಪ

ಸಹಾಯಕವಾಗುವುದು. ಇದು ಭಗವಂತನನ್ನು ಪಡೆಯುವ ಹಂಬಲವನ್ನು ತೀವ್ರಗೊಳಿಸಿ, ತನ್ನ ಸಾಧನೆಗಳಲ್ಲಿನ ಅತೃಪ್ತಿಯನ್ನು ಬಲಗೊಳಿಸುವುದು. ಇದೇ ವ್ಯಾಕುಲತೆ. ಈ ವ್ಯಾಕುಲತೆಯೇ ಧ್ಯಾನವಾದಾಗ ಭಗವಂತ ಅಂತರಂಗದೊಳಗೆ ತಾನಾಗಿಯೇ ವ್ಯಕ್ತನಾಗುವನು. ಇದೇ ಆತ್ಮದರ್ಶನ.

ಭಗವಾನರು ಜಪಸಾಧನೆ ಮತ್ತು ಆತ್ಮಸಾಕ್ಷಾತ್ಕಾರದ ವಿಚಾರವನ್ನು ಮತ್ತಷ್ಟು ವಿವರಿಸಿದರು. ಅಷ್ಟರಲ್ಲಿ ಸ್ವಲ್ಪ ದೂರದಲ್ಲಿ ಕುಳಿತಿದ್ದ ಒಬ್ಬ ಕುತೂಹಲಿ ಬ್ರಾಹ್ಮಣ ಭಕ್ತ, ಸೃಷ್ಟಿ ಮತ್ತು ಅದರ ಕಾರಣವನ್ನು ಕುರಿತು ಸ್ವಲ್ಪ ಜೋರಾಗಿ ಪ್ರಶ್ನೆ ಕೇಳಿದ: 'ಕೆಲವು ಶಾಸ್ತ್ರಗ್ರಂಥಗಳು ಬ್ರಹ್ಮನ ಕರ್ಮಾನುಸಾರ ಸೃಷ್ಟಿಯಾಗುವುದು ಎಂದು ಹೇಳುತ್ತವೆ, ಮತ್ತೆ ಕೆಲವು ಗ್ರಂಥಗಳು ಜೀವಿಗಳ ಕರ್ಮಾನುಸಾರ ಸೃಷ್ಟಿ ಎನ್ನುತ್ತವೆ. ಇದರಲ್ಲಿ ಯಾವುದು ಸರಿ?' ಶ್ರೀ ಭಗವಾನರು ಈ ಗೊಂದಲವನ್ನು ಪರಿಹರಿಸಬೇಕೆಂಬುದು ಆತನ ಅಪೇಕ್ಷೆಯಾಗಿತ್ತು. ಶ್ರೀರಮಣರು ತಮ್ಮ ಕರುಣಾಪೂರ್ಣ ದೃಷ್ಟಿಯನ್ನು ಅವನೆಡೆಗೆ ಬೀರಿ, ಭಗವದ್ಗೀತೆಯ ಮತ್ತೊಂದು ಶ್ಲೋಕವನ್ನು ಉದ್ಧರಿಸುತ್ತ ಜಪದ ವಿಷಯವನ್ನೇ ವಿವರಿಸಿದರು:

**ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ ।**
**ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ ॥ (೫.೭)**

(ಯೋಗದಿಂದ ಮನಸ್ಸನ್ನು ಶುದ್ಧಗೊಳಿಸಿ, ಕರ್ತವ್ಯಗಳನ್ನು ಭಕ್ತಿಯಿಂದ ನೆರವೇರಿಸುತ್ತಾ, ಇಂದ್ರಿಯಗಳ ಮೇಲೆ ಹಿಡಿತ ಸಾಧಿಸಿ ಎಲ್ಲ ಜೀವಿಗಳಿಗೂ ಆತ್ಮವಾಗಿರುವ ಆತ್ಮವನ್ನು ಗ್ರಹಿಸಿದವನು ಯಾವ ಕರ್ಮ ಮಾಡುತ್ತಿದ್ದರೂ ಅದು ಅವನಿಗೆ ಅಂಟುವುದಿಲ್ಲ.)

ಈ ಗೀತಾಶ್ಲೋಕವನ್ನೇ ಆಧಾರವಾಗಿಟ್ಟುಕೊಂಡು ಶ್ರೀಭಗವಾನರು ೨೫ ನಿಮಿಷಗಳಿಗೂ ಹೆಚ್ಚು ಕಾಲ ಆಧ್ಯಾತ್ಮಿಕ ವಿಚಾರಗಳನ್ನು ವಿವರಿಸಿದರು. ಹಾಲ್‌ನಲ್ಲಿ ನೆರೆದಿದ್ದ ಭಕ್ತರು ಆತ್ಮಸಾಕ್ಷಾತ್ಕಾರವನ್ನು ಕುರಿತಾದ ಅವರ ಪವಿತ್ರ ಮಾತುಗಳನ್ನು ಆಸ್ವಾದಿಸಿದರು. ಆಧ್ಯಾತ್ಮಿಕ ಜ್ಞಾನಾಕಾಂಕ್ಷಿಯಾದವನು ಮೊದಲು ಮಂತ್ರವನ್ನು ಶ್ರದ್ಧೆ, ಭಕ್ತಿಗಳಿಂದ ಜೋರಾಗಿ ಜಪಿಸುತ್ತಾನೆ. ಭಗವತ್ಪ್ರೇಮ ದೃಢವಾಗುತ್ತಿದ್ದಂತೆ ಜಪವು ಅಂತರ್ಮುಖವಾಗುತ್ತದೆ. ಶರೀರ, ಇಂದ್ರಿಯ, ಮನಸ್ಸುಗಳು ಇದರಿಂದ ಶುದ್ಧವಾಗುತ್ತವೆ. ಆಗ ನಾನು, ನನ್ನದು ಎಂಬ ಭಾವ ದೂರವಾಗುತ್ತದೆ. ಎಲ್ಲ ಜೀವಿಗಳಲ್ಲಿರುವ ಪರತತ್ತ್ವದೊಡನೆ ಸಹಸ್ಪಂದನೆ ಹೊಂದಿ ಎಲ್ಲೆಲ್ಲೂ ಪರಮಾತ್ಮನನ್ನು ಕಾಣುತ್ತಾನೆ. ಮಂತ್ರದ ಪ್ರಭಾವ ಜ್ಞಾನಾಕಾಂಕ್ಷಿಯ ಎಲ್ಲ ಚಟುವಟಿಕೆಗಳಲ್ಲೂ ಎದ್ದು ಕಾಣುತ್ತದೆ. ಹೀಗೆ ಅವನು ಮಂತ್ರಮಯನಾಗಿಬಿಡುತ್ತಾನೆ. ತಾನು ಮಾಡಿದ ಕರ್ಮಗಳ ಫಲಕ್ಕೆ ಅಂಟಿಕೊಳ್ಳದೆ ಎಲ್ಲವೂ ಭಗವದರ್ಪಿತವಾಗಿ ಪರಿವರ್ತಿತವಾಗುತ್ತದೆ.

ಆ ಬ್ರಾಹ್ಮಣನು ಮತ್ತೊಮ್ಮೆ ಸೃಷ್ಟಿಯನ್ನು ಕುರಿತ ತನ್ನ ಪ್ರಶ್ನೆಯನ್ನು ಕೇಳಿದ. ಆದರೆ ಈ ಬಾರಿ ಭಗವಾನರು, ತಾವು ಈಗತಾನೇ ವಿವರಿಸಿದ ಕ್ರಮವನ್ನು ಅನುಸರಿಸಿ ಸಾಧನೆ ಮಾಡಿದರೆ ಅವನ ಎಲ್ಲ ಸಮಸ್ಯೆಗಳಿಗೂ ಉತ್ತರ ತನ್ನಿಂದ ತಾನೇ ಸ್ಫುರಿಸುವುದು; ಒಬ್ಬ ತನ್ನೊಳಗೆ ಮುಳುಗಿದನೆಂದರೆ ಮನಸ್ಸು 'ಆತ್ಮ'ದಲ್ಲಿ ಲೀನವಾಗುತ್ತದೆ. ಅಂತೆಯೇ ಭಕ್ತ, ಭಗವಂತ, ಪವಿತ್ರಗ್ರಂಥ ಈ ಭೇದಗಳೆಲ್ಲ ಭಗವಂತನ ಬೆಳಕಿನಲ್ಲಿ ಲೀನವಾಗುತ್ತವೆ – ಎಂದು ಉತ್ತರಿಸಿದರು.

## ಸ್ವಾಮಿ ವಿವೇಕಾನಂದರ ಭಾವಗಾಂಭೀರ್ಯ

ಸ್ವಾಮಿ ತುರೀಯಾನಂದರು ಹೇಳುತ್ತಾರೆ, "ಸ್ವಾಮೀಜಿಯವರ ಸತ್ವಗುಣ ಎಂತಹುದಾಗಿತ್ತು? ನಾನು ಅವರೊಂದಿಗೆ ವಾಸಿಸುತ್ತಿದ್ದಾಗ ಅದನ್ನು ಕಣ್ಣಾರೆ ಕಂಡಿದ್ದೇನೆ. ಅವರು ರಾತ್ರಿ ೯.೦೦ ಗಂಟೆಗೆ ಧ್ಯಾನಕ್ಕೆ ಕುಳಿತುಕೊಳ್ಳುತ್ತಿದ್ದರು. ಬೆಳಿಗ್ಗೆ ೫.೦೦ ಗಂಟೆಗೆ ಧ್ಯಾನ ಮುಗಿಸಿ ಏಳುತ್ತಿದ್ದರು. ಸೊಳ್ಳೆಗಳು ಅವರ ದೇಹವನ್ನು ಕಂಬಳಿಯ ಹಾಗೆ ಮುಚ್ಚಿಕೊಂಡರೂ ಅವರಿಗೆ ಗೊತ್ತಾಗುತ್ತಿರಲಿಲ್ಲ. ಅವರಿಗೆ ತಮ್ಮ ಇಂದ್ರಿಯ, ಮನಸ್ಸುಗಳ ಮೇಲೆ ಪೂರ್ಣ ಸ್ವಾಮ್ಯವಿದ್ದಿತು. ಆದರೆ ಅವರಿಗೆ ಚೆನ್ನಾಗಿ ಗೊತ್ತಿತ್ತು, ರಜೋಗುಣ ವೃದ್ಧಿಯಾಗದೆ ನಮ್ಮ ಭಾರತ ವಿಕಾಸವಾಗಲಾರದು. ಅದಕ್ಕಾಗಿ ಅವರು ನಿಷ್ಕಾಮ ಕರ್ಮಯೋಗವನ್ನು ವಿಧಿಸಿದರು. ತನ್ನ ಜೀವನ ಮತ್ತು ತನ್ನ ಆಶೋತ್ತರಗಳನ್ನು ತ್ಯಾಗ ಮಾಡದೆ ವ್ಯಕ್ತಿ ಇನ್ನೊಬ್ಬರಿಗೆ ಒಳಿತನ್ನು ಮಾಡಲಾಗದು. ಅದಕ್ಕಾಗಿ ಅಪಾರ ಸಹನೆ ಮತ್ತು ಮಾನವ ಅನುಕಂಪ ಬೇಕು. ಇದು ಸ್ವಾಮೀಜಿಯವರು ಹೇಳಿಕೊಟ್ಟ ಸೇವಾಧರ್ಮ"

ಅವರ ವ್ಯಕ್ತಿತ್ವ ಅತಿ ಗಂಭೀರವಾಗಿತ್ತು, ಆಳವಾಗಿತ್ತು. ಅವರು ತಮ್ಮ ಭಾವದಲ್ಲಿದ್ದಾಗ ಅನ್ಯಮನಸ್ಕರಾಗಿದ್ದಂತೆ ತೋರುತ್ತಿತ್ತು. ಅವರನ್ನು ಸಮೀಪಿಸಲು ಭಯವಾಗುವಂತಿತ್ತು ಅವರ ಭಾವಗಂಭೀರ್ಯ. ಆದರೆ ಅತಿ ಆಕರ್ಷಕ ವ್ಯಕ್ತಿತ್ವ ಅವರದಾಗಿತ್ತು ! ಅವರ ಕಮಲದಳದಂತಹ ವಿಶಾಲ ನೇತ್ರಗಳು ಸದಾ ದಯಾರ್ದ್ರವಾಗಿದ್ದುವು. ಸ್ವಾಮಿ ಶಾರದಾನಂದರು, "ಅವರ ಕಣ್ಣುಗಳನ್ನು ಹೇಗೆ ತಾನೆ ವರ್ಣಿಸಲಿ?" ಎನ್ನುತ್ತ ಮೌನರಾಗುತ್ತಾರೆ !

*ಸ್ವಾಮಿ ಚೇತನಾನಂದರ 'Various Facts of Swami Vivekananda' ಲೇಖನ, 'Samvit' ಪತ್ರಿಕೆ* ಅನು: ಮಾತಾ ತ್ಯಾಗಮಯೀ

# ನೆನಪಿನಂಗಳದಲ್ಲಿ ಮೂವರು ಶ್ರೇಷ್ಠ ಸಂನ್ಯಾಸಿಗಳು

## ಭಾಗ–೧

**ಸ್ವಾಮಿ ಶ್ರೀಧರಾನಂದ**



ಸ್ವಾಮಿ ಮಾಧವಾನಂದಜಿ ಮಹಾರಾಜ್

ಆಸ್ಟ್ರೇಲಿಯದ ಸಿಡ್ನಿಯಲ್ಲಿರುವ ವೇದಾಂತ ಸೆಂಟರ್‌ನ ಅಧ್ಯಕ್ಷರಾದ ಸ್ವಾಮಿ ಶ್ರೀಧರಾನಂದರು ೨೦೦೮ರ ಜನವರಿ ೯ ರಂದು 'ಉದ್ಬೋಧನ ಕಾರ್ಯಾಲಯ' ದಲ್ಲಿ ನೀಡಿದ ಭಾಷಣವನ್ನು ಆಧರಿಸಿ ಈ ಸ್ಮೃತಿಲೇಖನವನ್ನು ಬರೆಯಲಾಗಿದೆ. ರಾಮಕೃಷ್ಣ ಮಹಾಸಂಘದ ಬಂಗಾಳಿ ಮಾಸ ಪತ್ರಿಕೆ 'ಉದ್ಬೋಧನ' ದ ಸೆಪ್ಟಂಬರ್ ೨೦೧೨ರ ವಿಶೇಷ ಸಂಚಿಕೆ ಯಲ್ಲಿ ಪ್ರಕಟವಾದ ಈ ಲೇಖನದ ಕನ್ನಡಾನುವಾದವನ್ನಿಲ್ಲಿ ಪ್ರಕಟಿಸುತ್ತಿದ್ದೇವೆ. ಅನು: ಸ್ವಾಮಿ ಜ್ಞಾನಯೋಗಾನಂದ

### ಪೀಠಿಕೆ

**ನಾ**ವೆಲ್ಲರೂ ಶ್ರೀಮಾತೆಯವರ ಶಿಷ್ಯಂದಿರೇ. ಯಾವ ಸೌಭಾಗ್ಯದಿಂದ ನಾನು ಶ್ರೀರಾಮಕೃಷ್ಣ ಮಹಾಸಂಘವನ್ನು ಸೇರಿ ಅಮೂಲ್ಯವಾದ ಸಂಪತ್ತನ್ನು ಗಳಿಸಿದೆನೋ ಅದರ ಬಗ್ಗೆ ಒಂದೆರಡು ಮಾತುಗಳನ್ನು ಹೇಳುತ್ತೇನೆ. ಈ ಸಂಪತ್ತು ಆಧ್ಯಾತ್ಮಿಕ ಸಂಪತ್ತು. ಶ್ರೀಮಾತೆಯವರ ನೇರ ಶಿಷ್ಯರ ಪದತಲ ದಲ್ಲಿ ಕುಳಿತು, ಅವರನ್ನು ಕಾಡಿ ಬೇಡಿ, ಒಂದೊಂದು ಬಾರಿ ಅವರಿಂದ ಹೊಡೆಸಿಕೊಂಡು ಎಂಥೆಂಥ ಅಮೃತದಂತಹ ಮಾತುಗಳನ್ನು ಹಾಗೂ ಅವರ ನೆನಪಿನ ಕಥೆಗಳನ್ನು ಕೇಳಿ ದೆನೋ ಅವೆಲ್ಲ ನನ್ನ ಹೃದಯವನ್ನು ಚಿರಕಾಲ ಪೋಷಿಸಿವೆ. ಅಂಥ ಮೂವರು ಶ್ರೇಷ್ಠ ಸಂನ್ಯಾಸಿಗಳ ಹೆಸರು ಈಗ ನನ್ನ ನೆನಪಿಗೆ ಬರುತ್ತಿದೆ. ಯಾವಾಗ ನಾನು ಬೇಲೂರು ಮಠವನ್ನು ಸೇರಿ ಶ್ರೀರಾಮಕೃಷ್ಣರ ಆಶ್ರಯವನ್ನು ಪಡೆದೆನೋ, ಆಗ ಇವರೆಲ್ಲರೂ ತಮ್ಮ ತಮ್ಮ ಮಹಿಮೆಯ ಉತ್ತುಂಗ ಶಿಖರದಲ್ಲಿ ವಿಹರಿಸುತ್ತಿದ್ದರು. ಅವರೇ ಸ್ವಾಮಿ ಮಾಧವಾನಂದಜಿ, ಸ್ವಾಮಿ ಶಾಂತಾನಂದಜಿ ಹಾಗೂ ಸ್ವಾಮಿ ಜಗದಾನಂದಜಿ. ನಾನು ಸ್ವಾಮಿ ವಿರಜಾನಂದರ ದರ್ಶನ ಹಾಗೂ ಅವರಿಂದ ಮಂತ್ರ ದೀಕ್ಷೆಯನ್ನು ಪಡೆಯುವ ಭಾಗ್ಯ ಹೊಂದಿದ್ದೆ. ಆದರೆ ಅವರ ಬಗ್ಗೆ ನಾನು ಹೆಚ್ಚೇನೂ ಹೇಳಲಾರೆ – ಏಕೆಂದರೆ ಆಗ ಅವರ ಆರೋಗ್ಯ ಚೆನ್ನಾಗಿರಲಿಲ್ಲ. ಉಳಿದ ಮೂವರೊಂದಿಗೆ ನನ ಗುಂಟಾದ ಒಡನಾಟದ ಬಗ್ಗೆ ನನಗೆ ಎಷ್ಟು ಸಾಧ್ಯವೋ ಅಷ್ಟನ್ನು ಈಗ ಹೇಳುತ್ತೇನೆ.

### ಸ್ವಾಮಿ ಮಾಧವಾನಂದರು

೧೯೪೭ನೇ ಇಸವಿಯ ನವಂಬರ್ ೧೭ರಂದು ನಾನು ಸಂನ್ಯಾಸಿಯಾಗುವ ಉದ್ದೇಶದಿಂದ ಮನೆ ಬಿಟ್ಟು ಬಂದೆ. ನನ್ನ ಗುರು ಸ್ವಾಮಿ ವಿರಜಾನಂದರು ನಿರ್ದೇಶಿಸಿದ್ದರು: ಸಂನ್ಯಾಸಿಯಾಗುವ ಮೊದಲು ತಾಯಿ, ತಂದೆಯರ ಆಶೀರ್ವಾದ ಪಡೆದು, ಅವರೇ ನನ್ನನ್ನು ಬೇಲೂರು ಮಠಕ್ಕೆ ಸೇರಿಸಿಕೊಳ್ಳುವಂತೆ ಹೇಳಬೇಕು, ಎಂಬುದಾಗಿ. ಅವರು ಹಾಗೆ ಮಾಡಿದರೆ ಮಾತ್ರ ನಾನು ಸಂನ್ಯಾಸಿಯಾಗಬಲ್ಲೆ. ಶ್ರೀಮಾತೆಯವರ ಕೃಪೆಯಿಂದಾಗಿ ಹಾಗೆಯೇ ಆಯಿತು. ಇದರ ನಂತರವೇ ನನಗೆ ಸ್ವಾಮಿ ಮಾಧವಾನಂದಜಿಯವರ ಪರಿಚಯವಾಯಿತು. ನಾನು ರಾಮಕೃಷ್ಣ ಮಹಾಸಂಘವನ್ನು ಸೇರಿದ ದಿನವೇ ಪಾರ್ವತಿ ಮಹಾರಾಜರು (ಸ್ವಾಮಿ ಶಾಂತ ಸ್ವರೂಪಾನಂದಜಿ) ನನಗೆ ಹೇಳಿದರು, "ಸಲಿಲ್, ನಮ್ಮ

ಸಂಘದಲ್ಲಿ ಇದೊಂದು ನಿಯಮ, ಆಶ್ರಮ ಸೇರಿಕೊಳ್ಳುವವರು ಮೊದಲು ಶ್ರೀರಾಮಕೃಷ್ಣರಿಗೆ ಪ್ರಣಾಮ ಮಾಡಬೇಕು. ನಡೆ, ಮೊದಲು ನಾವು ಶ್ರೀರಾಮಕೃಷ್ಣರಿಗೆ ಪ್ರಣಾಮ ಮಾಡೋಣ. ಅನಂತರ ಇತರ ಸಾಧುಗಳ ಪರಿಚಯ ಮಾಡಿಸುತ್ತೇನೆ." ಪ್ರಣಾಮ ಇತ್ಯಾದಿ ಮುಗಿದ ನಂತರ ಪಾರ್ವತಿ ಮಹಾರಾಜರು ನನ್ನನ್ನು ಸ್ವಾಮಿ ಮಾಧವಾನಂದಜಿಯವರ ಕೋಣೆಗೆ ಕರೆದುಕೊಂಡು ಹೋದರು. ಇದೇ ನನ್ನ-ಅವರ ಪ್ರಥಮ ಭೇಟಿ. ನಾನು ಅವರಿಗೆ ಪ್ರಣಾಮ ಮಾಡಿದೆ. ಶಾಂತಾನಂದಜಿ, ಮಾಧವಾನಂದಜಿ ಇಬ್ಬರದೂ ಬೇರೆ ಬೇರೆ ಸ್ವಭಾವ; ಆದರೆ ಅವರಿಬ್ಬರೂ ನಿಸ್ಸಂದೇಹವಾಗಿಯೂ ಜೀವನ್ಮುಕ್ತ ಪುರುಷರು ಎಂದು ನನ್ನ ಅಲ್ಪಮತಿಗೆ ತಿಳಿಯಿತು. ಅವರಿಬ್ಬರ ವ್ಯಕ್ತಿತ್ವ ಎರಡೂ ಬೇರೆ ಬೇರೆ ಎನ್ನುವಂತಿತ್ತು. ಇರಲಿ, ಪಾರ್ವತಿ ಮಹಾರಾಜರತ್ತ ನೋಡಿದ ಅವರು, "ಯಾರು ಈ ಹುಡುಗ?" ಎಂದು ಕೇಳಿದರು. ಪಾರ್ವತಿ ಮಹಾರಾಜ್ ನನ್ನ ಪರಿಚಯ ಮಾಡಿಕೊಟ್ಟರು. ನಾನೆಂದೆ, "ಮಹಾರಾಜ್, ನಾನು ಸಂನ್ಯಾಸಿಯಾಗುತ್ತೇನೆ." ಸ್ವಾಮಿ ಮಾಧವಾನಂದಜಿ ನನ್ನ ಕಡೆ ನೋಡುತ್ತಾ ಹೇಳಿದರು, "ನಿನ್ನ ಮುಖ ನೋಡಿದರೆ ನೀನು ಆದರ್ಶವಾದಿ ಅನ್ನಿಸುತ್ತದೆ, ಕನಸು ಕಾಣುವವನು ಅಂತ ಅನ್ನಿಸುತ್ತದೆ. ನನಗೆ ನೋಡು, ಯಾವುದು ಒಳ್ಳೆಯದು ಯಾವುದು ಕೆಟ್ಟದ್ದು ಅಂತ ಸ್ವಲ್ಪವೂ ಗೊತ್ತಾಗುವುದಿಲ್ಲ. ನೀನು ಇನ್ನೂ ನನ್ನೊಂದಿಗೆ ಪರಿಚಯ ಮಾಡಿಕೊಂಡಿಲ್ಲ, ಮಾತುಕತೆಯಾಡಿಲ್ಲ. ನಾವು ಯಾವ ರೀತಿಯ ಮನುಷ್ಯರು ಅಂತ ಪರಸ್ಪರ ತಿಳಿದುಕೊಂಡಿಲ್ಲ. ನೀನು ಎಂಥಾ ಹುಡುಗ ಎನ್ನುವುದೂ ನನಗೆ ಗೊತ್ತಾಗಿಲ್ಲ. ಇದ್ದಕ್ಕಿದ್ದಂತೆ ಬಂದು ಮೇಲೆಬಿದ್ದು ಹೇಳುತ್ತಿದ್ದೀಯ, ನೀನು ಸಂನ್ಯಾಸಿಯಾಗುತ್ತೀಯಾ ಅಂತ! ಹಾಗಿದ್ದರೆ ಕೇಳು, ನೀನು ಇಲ್ಲಿ ಬಂದುಬಿಟ್ಟಿದ್ದೀಯಾ, ನಿನ್ನನ್ನು ನಾನು ಹಿಂದಕ್ಕೆ ಕಳುಹಿಸಲಾರೆ. ಆದರೆ ನಾನು ಒಂದೆರಡು ಮಾತು ಹೇಳುತ್ತೇನೆ, ಅದನ್ನು ಯಾವಾಗಲೂ ನೆನಪಿನಲ್ಲಿಟ್ಟುಕೋ" ಎಂದರು. ಆಗ ನನಗೆ ತುಂಬ ಭಯವಾಯಿತು. ಅವರು ರಾಮಕೃಷ್ಣ ಮಠ ಮತ್ತು ಮಿಷನ್ನಿನ ಜನರಲ್ ಸೆಕ್ರೆಟರಿ ಮಹಾರಾಜರು. ನಾನು ಕೈ ಜೋಡಿಸಿ ಹೇಳಿದೆ, "ಆಗಲಿ, ಮಹಾರಾಜ್." ಅನಂತರ ನಾನು ಗಮನಿಸಿದೆ, ಅವರು ನಡುನಡುವೆ ಇಂಗ್ಲಿಷ್‌ನಲ್ಲಿ ಮಾತನಾಡುತ್ತಿದ್ದರು. ತುಂಬ ಸೊಗಸಾಗಿತ್ತು ಅವರ ಇಂಗ್ಲಿಷ್ ಭಾಷೆ. ಈ ಸಲವೂ ಅವರು ಇಂಗ್ಲಿಷ್ ಮಿಶ್ರಿತ ಭಾಷೆಯಲ್ಲಿ ನನಗೆ ಹೇಳಿದರು, "ನೋಡಯ್ಯಾ, ನೀನು ಈ ರೀತಿ ಯೋಚಿಸಬೇಡ– Ramakrishna Mission is something which is created in the heaven and has dropped from the sky ಅಂತ. ಇದು ಯಾವುದೇ isolated world ಅಲ್ಲ; ಇಲ್ಲಿ ನೀನು every cross-section of human society - from the best to the worst - ಎಲ್ಲ ಬಗೆಯ ವ್ಯಕ್ತಿಗಳನ್ನು ನೋಡುತ್ತೀಯೆ. ಅವರ ನಡುವೆಯೇ ನೀನು struggle ಮಾಡುತ್ತ, you have to workout your destiny to reach your goal. ನೀನು ಹಾಗೆ ಮಾಡಬಲ್ಲೆಯಾದರೆ ಆಗ ಹೇಳುತ್ತೇನೆ, ನೀನು ಸಾಹಸಿ ಹುಡುಗ ಅಂತ." ಇದೇ ಅವರ ಕೋರಿಕೆಯಾಯಿತು.

ಇಲ್ಲಿ ಒಂದು ಸ್ವಾರಸ್ಯಕರವಾದ ಸಂಗತಿಯನ್ನು ಹೇಳುತ್ತೇನೆ. ವಿಷಯ ಸ್ವಾರಸ್ಯಕರವಾಗಿದ್ದರೂ, ಅದರ ಹಿಂದೆ ಮಹತ್ವಪೂರ್ಣವಾದ ಒಂದು ಬೋಧನೆ ಇದೆ. ಮಾಧವಾನಂದರು ಎರಡು ವರ್ಷಗಳ ಕಾಲ ವಿಶ್ರಾಂತಿಗಾಗಿ ಕಾಶಿಗೆ ಬಂದಿದ್ದರು. ಅವರು ಅತ್ಯಂತ ಗಂಭೀರ ಸ್ವಭಾವದವರೆಂದು ಅವರ ಬಳಿಗೆ ಯಾರೂ ಹೋಗುತ್ತಿರಲಿಲ್ಲ. ಆಗ ಕಾಶಿ ಸೇವಾಶ್ರಮದ ಸೆಕ್ರೆಟರಿಯಾಗಿದ್ದವರು ಬುದ್ಧ ಮಹಾರಾಜರು. ಒಂದು ದಿನ ಅವರು ನನ್ನನ್ನು ಕರೆದು, "ಸಲಿಲ್, ನೀನು ಮಹಾರಾಜರ ಹತ್ತಿರ ಸ್ವಲ್ಪ ಹೋಗಿಬಂದು ಮಾಡಬೇಕು, ಮಾತುಕತೆ ಆಡಬೇಕು. ಯಾರನ್ನೂ ಈ ಕೆಲಸಕ್ಕೆ ಒಪ್ಪಿಸಲಾಗಲಿಲ್ಲ. ನೀನು ಅವರ ಸೇವಕನಾಗಿ ಈ ಕೆಲಸ ಮಾಡಬಲ್ಲೆಯಾ?" ಎಂದು ಕೇಳಿದರು. ಅದಕ್ಕೆ ನಾನು, "ಮಹಾರಾಜ್, ಸಂತೋಷವಾಗಿ ಆ ಕೆಲಸ ಮಾಡಬಲ್ಲೆ" ಎಂದೆ. ನಿಜವಾಗಿಯೂ ನಾನು ಈ ಕೆಲಸವೇ ಬೇಕೆಂದು ಬಯಸಿದ್ದೆ. ಆದರೆ ಭಯದಿಂದ ಯಾರಿಗೂ ಹೇಳಿರಲಿಲ್ಲ. ಇದನ್ನೇ ಯಾರಾದರೂ ನನಗೆ ಹೇಳಿದ್ದರೆ ಚೆನ್ನಾಗಿತ್ತು ಎಂದುಕೊಂಡಿದ್ದೆ. "ಅಬ್ಬಾ, ಬದುಕಿಕೊಂಡೆ" ಎನ್ನುತ್ತ ಬುದ್ಧ ಮಹಾರಾಜರು ನನ್ನನ್ನು ಸ್ವಾಮಿ ಮಾಧವಾನಂದರ ಬಳಿಗೆ ಕರೆದುಕೊಂಡು ಹೋದರು. "ಮಹಾರಾಜ್, ನೀವು ಎಷ್ಟು ದಿನಗಳಿಂದ ಇಲ್ಲಿದ್ದೀರಿ! ಇನ್ನು ಮೇಲಿಂದ ಈ ಹುಡುಗ ನಿಮ್ಮ ಸೇವೆ ಮಾಡುತ್ತಾನೆ" ಎಂದರು. ಸ್ವಾಮಿ ಮಾಧವಾನಂದರು ಗಂಭೀರ ಭಾವದಿಂದ, "ನೋಡು ಬುದ್ಧ, ನಾನು ಏನೇನು ಕೆಲಸ ಹೇಳುತ್ತೇನೋ ಅದನ್ನು ಹಾಗೆಯೇ ಮಾಡಬೇಕು ಅಂತ ಅವನಿಗೆ ಸರಿಯಾದ ರೀತಿಯಲ್ಲಿ ಹೇಳಿಬಿಡು. ಸೇವೆಯ ಹೆಸರಿನಲ್ಲಿ ಮತ್ತೆ ನನಗೆ ತೊಂದರೆಯಾಗಬಾರದು" ಎಂದರು. ಹಾಗೇ ಆಗಲಿ ಎಂದು ತೀರ್ಮಾನವಾಯಿತು.

ಅವರೊಂದಿಗೆ ಸ್ವಲ್ಪ ಪರಿಚಯವಾಗುತ್ತಿದ್ದಂತೆ ಮಾಧವಾನಂದಜಿ ನನಗೆ ಹೇಳಿದರು, "ನೋಡು ಸಲಿಲ್, ನಿನಗೆ ನಾನು ಏನು ಕೆಲಸ ಹೇಳುತ್ತೇನೋ, ಅದಷ್ಟೇ ಮಾಡು. ಅದಕ್ಕಿಂತ ಹೆಚ್ಚು ಏನನ್ನೂ ಮಾಡುವುದಕ್ಕೆ ಹೋಗಬೇಡ." ಅದಕ್ಕೆ ನಾನೆಂದೆ, "ಆಗಲಿ ಮಹಾರಾಜ್, ನಾನೇನು ಮಾಡಬೇಕು ಹೇಳಿ." ಅವರೆಂದರು, "ನಾನು ಮುದುಕನಾಗಿದ್ದೇನೆ. ಕೋಣೆ ಗುಡಿಸಲು, ಒರೆಸಲು ಸಾಧ್ಯವಾಗುತ್ತಿಲ್ಲ. ನೀನು ನನಗೆ ಈ ಕೆಲಸ ಮಾಡಿಕೊಡಬೇಕು. ಅದರೆ ನೀನು ನನ್ನ ಬಟ್ಟೆಬರೆ ಇತ್ಯಾದಿ ಒಗೆಯುವುದು ಬೇಡ. ಅವುಗಳನ್ನು ನಾನೇ ಒಗೆಯುತ್ತೇನೆ. ಮೋಡ ಬಂದುಬಿಟ್ಟರೆ, ಒಗೆದ ಬಟ್ಟೆಗಳನ್ನು ಎಲ್ಲಿಗಾದರೂ ತೆಗೆದುಕೊಂಡು ಹೋಗಿ, ಅದನ್ನು ಒಣಗಿಸುವ ವ್ಯವಸ್ಥೆ ಮಾಡು. ಅಲ್ಲದಿದ್ದರೆ ನಾನೇ ಅವನ್ನು ವರಾಂಡದಲ್ಲಿ ಒಣಗಲು ಹಾಕಿಬಿಡುತ್ತೇನೆ" ಎಂದರು. "ಬೇರೆ

ಏನು ಮಾಡಬೇಕು ಮಹಾರಾಜ್?" ಎಂದು ನಾನು ಕೇಳಿದೆ. ಅದಕ್ಕೆ ಅವರು, "ನನಗೆ ಊಟ ತೆಗೆದುಕೊಂಡು ಬಾ, ನನಗೆ ಹೆಚ್ಚು ನಡೆಯುವುದು ಕಷ್ಟ" ಎಂದರು. ಶ್ರೀರಾಮಕೃಷ್ಣರ ದೇವಸ್ಥಾನ (ಅದ್ವೈತ ಆಶ್ರಮ) ದಿಂದ ಅವರಿಗಾಗಿ ಪ್ರಸಾದ ಬರುತ್ತಿತ್ತು. ಮೊದಲ ಸಲ ಪ್ರಸಾದ ತರಲು ಅಲ್ಲಿಗೆ ಹೋದಾಗ ಅಲ್ಲಿ ಅಡುಗೆ ಇತ್ಯಾದಿ ಸೇವೆ ಮಾಡುವ ಭಂಡಾರಿ ಸ್ವಾಮೀಜಿ ನನಗೆ ಹೇಳಿದರು, "ನೀನು ಇದಕ್ಕಾಗಿ ಬರಬೇಕಾಗಿಲ್ಲ, ನೀನು ಹೋಗು. ಮಹಾರಾಜರಿಗೋಸ್ಕರ ನಾವು ಅಲ್ಲಿಗೇ ಪ್ರಸಾದ ಕಳುಹಿಸಿಕೊಡುತ್ತೇವೆ. ಇದು ನಮ್ಮ ಕೆಲಸ" ಎಂದರು. ಅನಂತರ ನನಗೆ ಆ ಕೆಲಸವನ್ನು ಮಾಡಲಾಗಲಿಲ್ಲ. ನನಗೆ ಹೆಚ್ಚೇನೂ ಕೆಲಸವಿಲ್ಲ ಎಂದು ನನಗರ್ಥವಾಯಿತು. ಒಂದು ದಿನ ನಾನು ತುಂಬ ಅಳುಕುತ್ತ ಮಹಾರಾಜರ ಬಳಿಗೆ ಹೋಗಿ ಹೇಳಿದೆ, "ಮಹಾರಾಜ್, ನಿಮಗೆ ಇದರ ಅಗತ್ಯವಿಲ್ಲ ಎಂದು ನನಗೆ ಗೊತ್ತು; ಆದರೂ ನನ್ನ ಒಳಿತಿಗಾಗಿ ನೀವು ಉಪ ಯೋಗಿಸುತ್ತಿರುವ ಬಟ್ಟೆಬರೆಗಳನ್ನು ಒಗೆಯಲು ದಯವಿಟ್ಟು ಅನುಮತಿ ನೀಡಿ" ಎಂದೆ. ಅದೇನಾಯಿತೋ ಅರಿಯೆ, ಅವರು ಕೃಪೆ ತೋರಿ ಹೇಳಿದರು, "ಸರಿ!" ಅನಂತರ ಮುಂದುವರಿಸುತ್ತ, "ನೀನು ನನ್ನ ಹೊರ ಉಡುಪುಗಳನ್ನು– ಜುಬ್ಬಾ, ಬನೀನು, ಧೋತಿ, ಇತ್ಯಾದಿಗಳನ್ನು ಒಗೆಯಬಹುದು. ಆದರೆ ನನ್ನ ಕೌಪೀನವನ್ನು ನಾನೇ ಒಗೆದು ಒಣಗಿಸಿ ಕೊಳ್ಳುತ್ತೇನೆ" ಎಂದರು.

ಅವರಿಗೆ ತುಸು ನೆಗಡಿಯ ತೊಂದರೆ ಇತ್ತು. ಒಂದು ಸಲ ಅವರ ಶರ್ಟನ್ನು ಒಗೆಯುವಾಗ ಪಾಕೆಟ್‌ನಲ್ಲಿ ಒಂದು ಕರ್ಚೀಫ್ ಸಿಕ್ಕಿತು. ಅದನ್ನು ಬಹಳ ಕಾಲ ಉಪಯೋಗಿಸಿ, ಚೆನ್ನಾಗಿ ಒಗೆದುಹಾಕಿ, ಬಟ್ಟೆ ಜೀರ್ಣವಾಗಿ ಹೋಗಿತ್ತು. ಅವರು ಅದನ್ನು ಇನ್ನೂ ಉಪಯೋಗಿಸುತ್ತಿದ್ದರು. ಅದಕ್ಕೆ ಸಾಬೂನು ಹಚ್ಚಿ, ಚೆನ್ನಾಗಿ ಒಗೆದು, ಶುಭ್ರವಾಗಿ ಒಣಗಿಸಿಕೊಟ್ಟೆ. ಆಗ ಮಹಾರಾಜರೊಂದಿಗೆ ತುಸು ಚೇಷ್ಟೆ ಮಾಡಬೇಕೆಂದು ನನಗೆ ಒಂದು ಆಲೋಚನೆ ಬಂತು. ನಾವೆಲ್ಲ ಹಳೆಯ ಸಾಧುಗಳನ್ನು ಜಿಪುಣರೆಂದೇ ಕರೆಯುತ್ತಿದ್ದೆವು. ಏಕೆಂದರೆ ಅವರು ಯಾವುದೇ ಕಾರಣಕ್ಕೂ ಮುಕ್ತವಾಗಿ ಖರ್ಚು ಮಾಡುತ್ತಿರಲಿಲ್ಲ. ಹಾಗೆ ಮಾಡಿದರೆ ಅದನ್ನು ಅವರು ದುಂದುಗಾರಿಕೆಯೆಂದೇ ಭಾವಿಸುತ್ತಿದ್ದರು. ಇರಲಿ, ನಾನು ಮಹಾರಾಜರ ಬಳಿಗೆ ಹೋದೆ. ಅಲ್ಲಿ ಅವರು 'Reader's Digest' ಓದುತ್ತಿದ್ದರು. ನಾನು ಅವರ ಬಳಿಗೆ ಹೋಗಿ ತುಸು ದೂರದಿಂದಲೇ ಅವರ ಕರ್ಚೀಫನ್ನು ಬೆಳಕಿಗೆ ಅಡ್ಡವಾಗುವಂತೆ ಹಿಡಿದು, "ಮಹಾರಾಜ್, ಇದನ್ನು ಯಾವುದಾದರೂ exhibition ಗೆ ಕಳುಹಿಸಿದರೆ ಹೇಗೆ, ನಮ್ಮ ಜನರಲ್ ಸೆಕ್ರೆಟರಿ ಮಹಾರಾಜರ ಕರ್ಚೀಫ್ ಅಂತ ಹೇಳುತ್ತೇನೆ" ಎಂದೆ. ಅದಕ್ಕೆ ಅವರು, "ನಿನಗೆ ಇದು ಎಲ್ಲಿ ಸಿಕ್ಕಿತು? ಇದು ನನ್ನ personal use ನ ವಸ್ತು" ಎಂದರು. "ಇದು ನಿಮ್ಮ ಜೇಬಿನಲ್ಲಿತ್ತು. ನೀವು ಮೂಗು ಒರೆಸಿ ಒರೆಸಿ ಈ ಕರ್ಚೀಫ್‌ನ ಅವಸ್ಥೆ ಹೀಗಾಗಿದೆ. ಅದನ್ನು ನನಗೆ ಕೊಟ್ಟುಬಿಡಿ. ನಿಮ್ಮ ನೆನಪಿಗಾಗಿ ಇಟ್ಟುಕೊಳ್ಳುತ್ತೇನೆ" ಎಂದೆ ನಾನು. ಆಗ ಮಹಾರಾಜರು ಚಿಕ್ಕ ಹುಡುಗನಂತೆ ಎದ್ದು ಬಂದು, ಕರ್ಚೀಫನ್ನು ನನ್ನಿಂದ ಪಡೆಯಲು ಪೀಡಿಸತೊಡಗಿದರು. ಅವರು ಒಂದು ಕಾಲನ್ನು ಮುಂದಕ್ಕೆ ಚಾಚಿ ನನ್ನ ಹತ್ತಿರ ಬರುತ್ತಿದ್ದರೆ, ನಾನು ಹಿಂದಿನಿಂದ ತಪ್ಪಿಸಿಕೊಳ್ಳುತ್ತಿದ್ದೆ. ಅವರು ದಯನೀಯವಾದ ಸ್ವರದಿಂದ "ಏನು ಮಾಡಲಿ, ಏನು ಮಾಡಲಿ! ಅಮೆರಿಕದ ಒಬ್ಬಾಕೆ ವೃದ್ಧ ಮಹಿಳೆ (ಅವಳ ಹೆಸರು ಹೇಳಿದರು) ಪ್ರತಿ ತಿಂಗಳೂ ನನಗೆ ನಾಲ್ಕು ಕರ್ಚೀಫ್ ಕಳುಹಿಸುತ್ತಿದ್ದಳು. ಈಗ ಅವಳು ಇಹಲೋಕವನ್ನು ತ್ಯಜಿಸಿ ದ್ದಾಳೆ. ಅವಳು ಕೊಟ್ಟ ವಸ್ತುಗಳನ್ನು ಆಕೆಯ ನೆನಪಿಗೋಸ್ಕರ ಈಗಲೂ ನಾನು ಉಪಯೋಗಿಸುತ್ತಿದ್ದೇನೆ. ಇದನ್ನೂ ನೀನು ಬಿಸಾಕಿಬಿಡಬೇಡ. ನಿಮಗೆ ಎಲ್ಲವನ್ನೂ ವ್ಯರ್ಥ ಬಿಸಾಕುವ ಅಭ್ಯಾಸ" ಎಂದರು. ನಾನೆಂದೆ, "ಮಹಾರಾಜ್, ನಿಮಗೆ ನಾನು ನಾಲ್ಕು ಕರ್ಚೀಫ್ ತಂದುಕೊಡುತ್ತೇನೆ." ಅದಕ್ಕೆ ಅವರು, "ಯಾವತ್ತೂ ಹಾಗೆ ಮಾಡಬೇಡ. ಜನರಲ್ ಸೆಕ್ರೆಟರಿ ಯಾರಿಂದಲೂ ಏನನ್ನೂ ತೆಗೆದುಕೊಳ್ಳುವಂತಿಲ್ಲ. ಆ ಉಪೇನ್ (ಸ್ವಾಮಿ ವಿಮುಕ್ತಾನಂದರು) ಹದಿನಾಲ್ಕು ಆಣೆ ಖರ್ಚುಮಾಡಿ ಒಂದು Duckback ನ Hold-all ಅನ್ನು ಕೊಂಡುಕೊಂಡು ಬಂದು ನನಗೆ ಕೊಟ್ಟಿದ್ದ. ನೀನು ನನಗೆ ಏನನ್ನೂ ಕೊಡಬೇಡಪ್ಪಾ" ಎಂದರು. ಮಹಾರಾಜರ ಸ್ವಭಾವ ವಂತೂ ಕೇವಲ ಬಾಲಕನಂತಾಗಿಬಿಟ್ಟಿತ್ತು.

ಆದರೂ ನಾನೆಂದೆ – "ಮಹಾರಾಜ್, ನಾವು ಬ್ರಹ್ಮಚಾರಿ ಗಳು ಇಲ್ಲಿ (ಕಾಶಿಯಲ್ಲಿ) ಭಂಡಾರಕ್ಕೆ (ಅನ್ನಸಂತರ್ಪಣೆ) ಹೋದಾಗ ಅಲ್ಲಿ ನಮಗೂ ಎಂಟಾಣೆ ದಕ್ಷಿಣೆ ಕೊಡುತ್ತಾರೆ. ಆ ಹಣವನ್ನು ನಾನು ಹೆಚ್ಚೇನೂ ಖರ್ಚು ಮಾಡಿಲ್ಲ. ಏನೋ ಒಂದಿಷ್ಟು ಪುಸ್ತಕ ಕೊಂಡುಕೊಂಡು, ಉಳಿದ ಹಣವೆಲ್ಲ ನನ್ನ ಕೋಣೆಯಲ್ಲೇ ಇದೆ. ಮಹಾರಾಜ್, ಎಂಟಾಣೆಗೆ ಕಾಶಿಯ ಬಜಾರ್‌ನಲ್ಲಿ ನಾಲ್ಕು ಕರ್ಚೀಫ್ ಸಿಗುತ್ತದೆ. ನಿಮಗೋಸ್ಕರ ನಾನು ನಾಲ್ಕು ಕರ್ಚೀಫ್ ಕೊಂಡುಕೊಂಡು ತರುತ್ತೇನೆ. ನೀವು ದಯವಿಟ್ಟು ಅವುಗಳನ್ನು ಉಪಯೋಗಿಸಬೇಕು, ಮಹಾರಾಜ್." ಅವರು ತುಸು ದೃಢವಾಗಿ ಹೇಳಿದರು, "ಇಲ್ಲ, ನೀನು ಆ ಕೆಲಸವನ್ನು ಮಾತ್ರ ಮಾಡಕೂಡದು." ಅದಕ್ಕಾಗಿ ಬಹಳ ವಾದವಿವಾದಗಳಾದವು. ಅನಂತರ ಅವರು ತುಸು ಮೆತ್ತಗಾದರು, ನಾನೂ ಸುಮ್ಮನಾದೆ. ಆದರೆ ನಾನು ಒಂದು ದಿನ ಎಂಟಾಣೆಗೆ ನಾಲ್ಕು ಕರ್ಚೀಫ್ ಖರೀದಿ ಮಾಡಿ ತಂದೆ. ಇನ್ನು ಅದನ್ನು ಅವರಿಗೆ ಹೇಗೆ ಕೊಡಲಿ, ಯಾವಾಗ ಕೊಡಲಿ ಎಂದು ನಾನು ಚಿಂತಿಸತೊಡಗಿದೆ. ಏಕೆಂದರೆ, ನೇರ ಕೈಗೆ ಕೊಟ್ಟರೆ ಅವರು ಅದನ್ನು ಸ್ವೀಕರಿಸಲಾರರು ಅಂತ ನನಗೆ ಚೆನ್ನಾಗಿ ಮನವರಿಕೆಯಾಗಿತ್ತು.

ಇತ್ತ ಅವರಿಗೆ ಬೇಲೂರು ಮಠಕ್ಕೆ ಮರಳುವ ದಿವಸ ಸಮೀಪಿಸುತ್ತಿತ್ತು. ಅವರು ನನಗೆ ಪೆಟ್ಟಿಗೆಗಳನ್ನೆಲ್ಲ ಜೋಡಿ

ಸಿಡಲು ಹೇಳಿದರು. ನಾನು ಅವರ ಮುಂದೆ ಕುಳಿತು ಆ ಕೆಲಸಕ್ಕೆ ತೊಡಗಿದೆ. ಅವರು ತುಸು ಆಕಡೆ ಈಕಡೆ ನೋಡು ತ್ತಿದ್ದಾಗ ನಾನು ಒಂದು ಕಾಗದದಲ್ಲಿ ಆ ನಾಲ್ಕು ಕರ್ಚೀಫ್ ಗಳನ್ನು ಮಡಚಿ ಟ್ರಂಕಿನ ಬಲಗಡೆಯ ಮೂಲೆಯಲ್ಲಿ ಇಟ್ಟುಬಿಟ್ಟೆ. ಅವರಿಗೆ ನಾನು ಈ ಸಂಗತಿಯನ್ನು ಹೇಳಲೇ ಇಲ್ಲ. ನಾನು ಮತ್ತೆ ಆಲೋಚಿಸಿದೆ, ಇದೇನೋ ಕೆಲಸಕ್ಕೆ ಬಾರದ ವಸ್ತು ಅಂತ ಅವರು ಬಿಸಾಡಿಬಿಟ್ಟರೆ! ಅದಕ್ಕಾಗಿ ಅವ ರನ್ನು ರೈಲುಗಾಡಿಯಲ್ಲಿ ಕುಳ್ಳಿರಿಸಿದ ನಂತರ, ರೈಲು ನಿಧಾನ ವಾಗಿ ಚಲಿಸಲು ಆರಂಭಿಸಿದಾಗ (ಆಗ ಇದ್ದುದು ಸ್ಟೀಮ್ ಇಂಜಿನ್) ನಾನು ಕಿಟಕಿಯ ಹೊರಗಿನಿಂದ ಕೈಜೋಡಿಸಿ ಅವರಿಗೆ ಹೇಳಿದೆ: "ಮಹಾರಾಜ್, ನಿಮ್ಮ ಟ್ರಂಕಿನ ಮುಂಭಾಗ ದಲ್ಲಿ, ಬಲಕ್ಕೆ ಒಂದು ಸಣ್ಣ ಕಾಗದದ ಪ್ಯಾಕೆಟ್ ಇದೆ. ಅದನ್ನು ದಯವಿಟ್ಟು ಸ್ವೀಕರಿಸಿ ಹಾಗೂ ಉಪಯೋಗಿಸಿ." "ಓ, ನೀನು ಕೊಟ್ಟೇಬಿಟ್ಟೆಯಾ? ಬಾ, ಅದನ್ನು ಮೊದಲು ತೆಗೆದುಹಾಕು" ಎಂದರು. ನಾನೆಂದೆ, "ಮಹಾರಾಜ್, ಗಾಡಿ ಹೊರಟೇಬಿಟ್ಟಿದೆ ಯಲ್ಲ!" ಆಗ ಅವರು, "ಸರಿ, ಇರಲಿ. ನೀನು ಚೆನ್ನಾಗಿರು, ಆನಂದವಾಗಿರು" ಎಂದರು. ನಾನು ಈ ಸಲ ಗೆದ್ದುಬಿಟ್ಟೆ ಎಂದು ತಿಳಿದುಕೊಂಡೆ.

ಏಳು ದಿನಗಳ ನಂತರ ಬೇಲೂರು ಮಠದಿಂದ ಒಬ್ಬ ವ್ಯಕ್ತಿ ಕಾಶಿಗೆ ಬಂದಿದ್ದ. ಅವನು ಅಲ್ಲಿಗೆ ಬಂದು ವಿಚಾರಿಸ ತೊಡಗಿದ, "ಬ್ರಹ್ಮಚಾರಿ ಸಲಿಲ್ ಯಾರು?" ನಾನು ಹೋಗಿ ನೋಡಿದೆ, ಸ್ವಾಮಿ ಮಾಧವಾನಂದಜಿ ಅವರ ಕೈಯಲ್ಲಿ ನನ ಗೊಂದು ಪತ್ರವನ್ನು ಕೊಟ್ಟು ಕಳುಹಿಸಿದ್ದರು. ಅದರೊಂದಿಗೆ ಅದೇ ಪ್ಯಾಕೇಟ್ ಕೂಡಾ ಇತ್ತು. ಆಗ ನನಗೆ ದುಗುಡ ವುಂಟಾಯಿತು. ನಾನಾದರೋ ಒಬ್ಬ ಸಾಮಾನ್ಯ ಬ್ರಹ್ಮಚಾರಿ; ತುಂಬಾ ಕಷ್ಟಪಟ್ಟು ಭಿಕ್ಷೆಯಿಂದ ದೊರಕಿದ ಎಂಟಾಣೆ ಹಣವನ್ನು ಸಾಧುಗಳ ಸೇವೆಗಾಗಿ ಖರ್ಚುಮಾಡಿದೆ, ಅದನ್ನೂ ಅವರು ಹಿಂದಿರುಗಿ ಕಳುಹಿಸಿದ್ದರು. ಅವರು ಪತ್ರದಲ್ಲಿ ಬರೆದಿದ್ದರು, "ನೀನು ನನಗೆ ತಿಳಿಸದೆ, ನನ್ನ ಅನು ಮತಿಯಿಲ್ಲದೆ ಈ ವಸ್ತುವನ್ನು ನನ್ನ ಪೆಟ್ಟಿಗೆಯೊಳಗೆ ಇಟ್ಟಿದ್ದೆ. ಅದನ್ನು ನಾನು ಸ್ವೀಕರಿಸಲಿಲ್ಲ. ಅದು ಯಾರಿಗೆ ಸೇರಿದೆಯೋ, ಅವರಿಗೇ ಕಳುಹಿಸಿಕೊಟ್ಟಿದ್ದೇನೆ." ನಿಜವಾಗಿಯೂ ಆಗ ನನಗೆ ಅದೆಂಥ ನೋವಾಗಿತ್ತೆಂದರೆ, ನಾನೂ ಅವರಿಗೆ ಪತ್ರ ಬರೆದೆ: "ದೊಡ್ಡ ದೊಡ್ಡ ಸಾಧುಗಳ ಕೃಪೆಯಿಂದ ನಮ್ಮಂಥ ಬ್ರಹ್ಮಚಾರಿಗಳ ಜೀವನ ರೂಪುಗೊಳ್ಳುತ್ತಿದೆ. ಶ್ರೀಮಾತೆಯವರ ಶಿಷ್ಯನಾಗಿ ನಿಮಗೆ ಈ ನಾಲ್ಕು ಕರ್ಚೀಫ್‌ಗಳನ್ನು ಜೀರ್ಣಿಸಿ ಕೊಂಡು ನನ್ನ ಮೇಲೆ ಕೃಪೆ ತೋರುವಷ್ಟು ಕೂಡ ಸಾಮರ್ಥ್ಯ ವಿಲ್ಲ!" ನಾನು ದುಗುಡ, ಕೋಪಗಳಿಂದ ಆ ಧಾಟಿಯ ಪತ್ರ ಬರೆದಿದ್ದೆ. ಪತ್ರವನ್ನು ಪೋಸ್ಟ್ ಮಾಡಿ ಬಂದ ಬಳಿಕ ನನಗೆ ಭಯವಾಗತೊಡಗಿತು. ನಾನೇಕೆ ಇದನ್ನೆಲ್ಲ ಬರೆದೆ? ಕೆಲವು ದಿನಗಳ ನಂತರ ಸ್ವಾಮಿ ಮಾಧವಾನಂದರು ತಮ್ಮ ಕೈಯಿಂದಲೇ ಬರೆದ 'ಇನ್‌ಲ್ಯಾಂಡ್ ಲೆಟರ್' ನನ್ನ ಕೈ ಸೇರಿತು. ಹೆದರುತ್ತಲೇ ಅವರ ಪತ್ರವನ್ನೊಡೆದೆ. ನನ್ನ ಅಸಭ್ಯ ವರ್ತನೆಗೆ ಅವರು ಎಷ್ಟೊಂದು ಕೋಪಗೊಂಡಿರುತ್ತಾರೊ! ಪತ್ರದಲ್ಲಿ ಅವರು ಈ ರೀತಿ ಬರೆದಿದ್ದರು:

"ಪರಮ ಸ್ನೇಹಪಾತ್ರನಾದ ಶ್ರೀಯುತ ಸಲಿಲ್,

ನಿನ್ನ ಒಂದಿಷ್ಟು ಬೆಂಕಿಯಂತಿರುವ ಪತ್ರ ತಲುಪಿತು. ಪತ್ರವನ್ನೋದಿ ನನಗೆ ಹೃದಯ ತುಂಬಿಬಂತು. ನಾನು ಅಂದುಕೊಂಡೆ, ನಾನಂತೂ ಶ್ರೀಮಾತೆಯವರ ಶಿಷ್ಯನಾಗಲು ಅಯೋಗ್ಯ. ಯಾಕೋ ಗೊತ್ತಿಲ್ಲ, ನನಗೆ ನಿನ್ನ ನಾಲ್ಕು ಕರ್ಚೀಫ್‌ಗಳನ್ನು ಜೀರ್ಣಿಸಿಕೊಳ್ಳುವುದು ಸಾಧ್ಯವಾಗಲಿಲ್ಲ. ನೀನೇನೋ ಚರಿತ್ರೆ ಓದಿದ್ದೀಯೆ, ಶಿವಾಜಿ ಹಾಗೂ ರಾಮ ದಾಸರ ಕಥೆ ನಿನಗೆ ನೆನಪಿದೆಯಲ್ಲ? ಶಿವಾಜಿ ತನ್ನ ರಾಜ್ಯ ವನ್ನೆಲ್ಲಾ ರಾಮದಾಸರ ಚರಣಗಳಲ್ಲಿ ಅರ್ಪಿಸಿಬಿಟ್ಟ. ಆಗ ಗುರು ರಾಮದಾಸರು ಏನು ಮಾಡಿದರು? ಆ ರಾಜ್ಯವನ್ನು ಶಿವಾಜಿಗೆ ಮರಳಿ ಕೊಟ್ಟು, "ನನ್ನ ಹೆಸರು ಹೇಳಿ ನೀನು ರಾಜ್ಯಭಾರ ಮಾಡು" ಎಂದರು. ಶಿವಾಜಿ ತನ್ನ ಜೀವನ ದುದ್ದಕ್ಕೂ ಅದನ್ನೇ ಮಾಡಿದ. ಈಗ ನಾನು ಹೇಳುತ್ತೇನೆ, ನಿನ್ನಲ್ಲಿ ಎಷ್ಟು ಜೀರ್ಣಶಕ್ತಿ ಇದೆಯೋ ನೋಡೋಣ, ನೀನು ಈ ನಾಲ್ಕು ಕರ್ಚೀಫ್‌ಗಳನ್ನು ಸ್ವೀಕರಿಸು. ನನ್ನ ಹೆಸರು ಹೇಳಿಕೊಂಡು ಅದನ್ನು ಉಪಯೋಗಿಸಿ ನನ್ನ ಉದ್ಧಾರ ಮಾಡು(ವೆಯೆನು?)

ಎಂದಿಗೂ ನಿನ್ನ ಶುಭಾಕಾಂಕ್ಷಿ, ಮಾಧವಾನಂದ."

ಆ ಪತ್ರವನ್ನು ಕಷ್ಟಪಟ್ಟು ಎಷ್ಟೊಂದು ದಿನ ಸಂಗ್ರಹಿಸಿ ಇಟ್ಟಿದ್ದೆ! ಅದನ್ನು ಕುರಿತು ಇನ್ನೇನು ತಾನೆ ಹೇಳಲಿ! ಆ ಪತ್ರ ಅದೆಲ್ಲಿ ಕಳೆದುಹೋಯಿತೋ ಗೊತ್ತಿಲ್ಲ. ಹುಡುಕಿದರೆ ಸಿಗು ತ್ತಿಲ್ಲ. ನನ್ನಲ್ಲಿ ಸಂಶೋಧಕ ಮನೋಭಾವವಿರುತ್ತಿದ್ದರೆ ನಾನು ಆ ವಿಷಯಗಳನ್ನೆಲ್ಲ ಬರೆಯುತ್ತಿದ್ದೆ; ಅಂಥ ಪತ್ರಗಳನ್ನೆಲ್ಲ ಜಾಗರೂಕತೆಯಿಂದ ಇಟ್ಟಿರುತ್ತಿದ್ದೆ. ಈಗ ಅನಿಸುತ್ತಿದೆ, ನನ್ನ ದೇಹತ್ಯಾಗವಾದ ನಂತರ ಎಲ್ಲವೂ ಕಳೆದು ಹೋಗುವುದು. ಆದ್ದರಿಂದ, ನೆನಪಿನಲ್ಲಿ ಏನೇನು ಉಳಿದಿದೆಯೋ ಅದನ್ನೆಲ್ಲ ಇಲ್ಲಿ ಹಂಚಿಕೊಂಡಿದ್ದೇನೆ. ಇರಲಿ, ಇಲ್ಲಿ ಗಮನಾರ್ಹವಾದ ಒಂದು ಸಂಗತಿ ನಡೆದುಹೋಯಿತು – ನನಗೆ ವ್ಯಥೆಯಾಗ ಬಾರದು ಎನ್ನುವುದಕ್ಕಾಗಿ ಅವರು ನನ್ನ ಹಂತದವರೆಗೂ ಇಳಿದು ಬರಬೇಕಾಯಿತು. ಆದರೆ, ನನಗೆ ಇಲ್ಲಿಯವರೆಗೂ ಆ ನಾಲ್ಕು ಕರ್ಚೀಫ್‌ಗಳನ್ನು ಜೀರ್ಣಿಸಿಕೊಳ್ಳಲಾಗಲಿಲ್ಲ!

ಪ್ರೀತಿಗಿಂತ ಮಿಗಿಲಾದುದು ಪ್ರಪಂಚದಲ್ಲಿ ಮತ್ತೊಂದಿಲ್ಲ. ನಮ್ಮ ಹೃದಯಾಕಾಶವು ತುಚ್ಛ ಭಾವೋದ್ವೇಗ ಮತ್ತು ಆಸೆಗಳ ಮೋಡಗಳಿಲ್ಲದೆ ಸಂಪೂರ್ಣವಾಗಿ ನಿರ್ಮೂಲವಾದಾಗ ಮಾತ್ರ, ಈ ಪ್ರೀತಿ ನಮ್ಮಲ್ಲಿ ಉದಯಿಸಿ, ತನ್ನ ಪ್ರಕಾಶವನ್ನು ಎಲ್ಲರ ಮೇಲೂ ಬೀರ ಬಲ್ಲುದು.
–ಸ್ವಾಮಿ ರಾಮದಾಸ್

ಸ್ವಾಮಿ ನಿತ್ಯಸ್ಥಾನಂದ

# ಯೋಗಕ್ಷೇಮಂ ವಹಾಮ್ಯಹಂ




ನಮ್ಮ ಯೋಗಕ್ಷೇಮವನ್ನು ನೋಡಿಕೊಳ್ಳುವವರು ಅನೇಕರಿದ್ದಾರೆ. ಬಾಲ್ಯಾವಸ್ಥೆಯಲ್ಲಿ ನಮ್ಮ ತಂದೆತಾಯಿಗಳು ಯೋಗಕ್ಷೇಮವನ್ನು ನೋಡಿಕೊಳ್ಳುತ್ತಾರೆ. ವೃದ್ಧಾಪ್ಯದಲ್ಲಿ ಮಕ್ಕಳು ಆ ಕೆಲಸ ಮಾಡುತ್ತಾರೆ (ಇಲ್ಲದಿದ್ದರೆ ವೃದ್ಧಾಶ್ರಮವಿದೆ). ಸರ್ಕಾರವು ನಮ್ಮ ಯೋಗಕ್ಷೇಮ ನೋಡಿಕೊಳ್ಳುವುದಾಗಿ ಭರವಸೆ ನೀಡುತ್ತದೆ. ಜೀವವಿಮಾ ಸಂಸ್ಥೆಯವರು ಇದೇ ಭರವಸೆಯನ್ನು ನೀಡುತ್ತಾ ನಮ್ಮಿಂದ ಹಣ ಕಿತ್ತುಕೊಳ್ಳುತ್ತಾರೆ. ಭಗವದ್ಗೀತೆಯಲ್ಲಿ ಶ್ರೀಕೃಷ್ಣನೂ ಇದೇ ಭರವಸೆಯನ್ನು ನೀಡುತ್ತಾನೆ. ಆದರೆ ಅವನು ಒಂದು ಷರತ್ತನ್ನು ಹೇಳುತ್ತಾನೆ. ಆ ಷರತ್ತಿನಂತೆ ನಡೆದರೆ ಅವನು ನಮ್ಮ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಾನೆ. ಆದರೆ ಬೇರೆಯವರ ವಿಷಯದಲ್ಲಿ ಷರತ್ತಿಗೂ ಭರವಸೆಗೂ ಯಾವ ಕಾರ್ಯಕಾರಣ ಸಂಬಂಧವೂ ಇರುವುದಿಲ್ಲ.

**ಭಗವಂತನು ಹಾಕುವ ಷರತ್ತು ಇದು:** ಅನ್ಯ ಚಿಂತನೆಗಳನ್ನು ಬಿಟ್ಟು ಅವನನ್ನು ಮಾತ್ರ ಚಿಂತಿಸಬೇಕು, ಅವನನ್ನು ಮಾತ್ರ ಎಲ್ಲ ರೀತಿಯಲ್ಲಿಯೂ ಉಪಾಸಿಸಬೇಕು (**ಪರ್ಯುಪಾಸತೇ**). ಅಂದರೆ ಭಕ್ತನು ಮಾಡುವುದೆಲ್ಲವೂ ಅವನ ಉಪಾಸನೆಯೇ ಆಗಬೇಕು. ಎಲ್ಲ ಮಾನಸಿಕ ಕ್ರಿಯೆಯೂ ಅವನಿಗಾಗಿ, ಎಲ್ಲ ಭೌತಿಕ ಕ್ರಿಯೆಯೂ ಅವನಿಗಾಗಿ. ಅವನೊಡನೆಯೇ ಭಕ್ತನು ಯಾವಾಗಲೂ ಒಂದಾಗಿರುತ್ತಾನೆ (**ನಿತ್ಯಾಭಿಯುಕ್ತ**). ತನಗಾಗಿ ಅವನು ಏನನ್ನೂ ಮಾಡಿಕೊಳ್ಳಲಾಗದ ಸ್ಥಿತಿಯಲ್ಲಿರುತ್ತಾನೆ. ಅಂತಹ ಭಕ್ತರ ಯೋಗಕ್ಷೇಮವನ್ನು ದೇವರು ನೋಡಿಕೊಳ್ಳುತ್ತಾನೆ. ಬೇರೆಯವರನ್ನು ಅವನು ನೋಡಿಕೊಳ್ಳುವುದಿಲ್ಲವೆ? ಯಾವಾಗಲೂ ಎಲ್ಲವನ್ನೂ ನೋಡಿಕೊಳ್ಳುವವನು ಭಗವಂತನೇ. ಪ್ರಕೃತಿದತ್ತವಾದ ಮೂಲಭೂತವಸ್ತುಗಳ ಸಹಾಯದಿಂದಲೇ ಎಲ್ಲರೂ ಬದುಕಿರುವುದು. ಆದರೆ ಈ ಪ್ರಕೃತಿದತ್ತ ವಸ್ತುಗಳನ್ನು ಸರಿಯಾದ ರೀತಿಯಲ್ಲಿ ಬಳಸಿಕೊಳ್ಳಲಾಗದೆ ನಾವು ದುಃಖವನ್ನು ಅನುಭವಿಸುತ್ತೇವೆ – ಯೋಗವೂ ಇಲ್ಲ, ಕ್ಷೇಮವೂ ಇಲ್ಲ. ಪ್ರಕೃತಿ ನೀಡುವುದಕ್ಕಿಂತ ನಮ್ಮ ಬೇಡಿಕೆ ಜಾಸ್ತಿಯಾದಾಗ ಸಮಾಜ ಅವ್ಯವಸ್ಥಿತವಾಗುತ್ತದೆ. ಭಗವಂತನು ತನ್ನ ಭಂಡಾರವನ್ನು ಎಲ್ಲರಿಗೂ ತೆರೆದಿಟ್ಟಿದ್ದಾನೆ– ಯಾರು ಹೇಗೆ ಬೇಕಾದರೂ, ಎಷ್ಟು ಬೇಕಾದರೂ ಉಪಯೋಗಿಸಿಕೊಳ್ಳಲಿ ಎಂದು. ಎಲ್ಲರಿಗೂ ಸ್ವಾತಂತ್ರ್ಯವಿದೆ. ಆದರೆ ಈ ಸ್ವಾತಂತ್ರ್ಯದ ದುರ್ಬಳಕೆಯಿಂದ ದುಃಖ. ನಾವು ಬೀದಿನಾಯಿಗಳಿಗೆ ಊಟವನ್ನು ಹಾಕಿದಾಗ ಅವು ಪರಸ್ಪರ ಕಚ್ಚಾಡಿಕೊಂಡು, ಆಹಾರ ಪದಾರ್ಥವೆಲ್ಲ ಚೆಲ್ಲಾಪಿಲ್ಲಿಯಾಗಿ ಹರಡಿ ಯಾವ ನಾಯಿಗೂ ಸರಿಯಾಗಿ ಊಟ ಸಿಗದಂತಾಗುತ್ತದೆ. ಅಥವಾ ಇನ್ನಾವುದೋ ನಾಯಿ ಸದ್ದಿಲ್ಲದೆ ಎಲ್ಲವನ್ನೂ ತಿಂದುಕೊಂಡು ಹೋಗುತ್ತದೆ. ಇದೇ ನಮ್ಮ ಅವಸ್ಥೆ.

ಆದರೆ ಭಕ್ತನ ವಿಚಾರ ಬೇರೆ. ಅವನು ತನಗಾಗಿ ಏನೂ ಮಾಡಿಕೊಳ್ಳುವುದಿಲ್ಲ. ಏಕೆಂದರೆ ಅವನು ಅನ್ಯ ಚಿಂತೆ ಇಲ್ಲದೆ ಭಗವಚ್ಚಿಂತನೆಯಲ್ಲಿಯೇ ತೊಡಗಿರುವನು. ಸ್ವಾಭಾವಿಕವಾಗಿ ಮನಸ್ಸು ಒಂದೇ ವಸ್ತುವನ್ನು ಚಿಂತಿಸಲು ಇಷ್ಟಪಡುವುದಿಲ್ಲ. ಒಂದೇ ಪ್ರಾಪಂಚಿಕ ವಸ್ತುವಿನ ಮೇಲೂ ಅದು ನಿಲ್ಲುವುದಿಲ್ಲ. ನಮಗೆ ತುಂಬ ಆಸಕ್ತಿಯಿರುವ ವಸ್ತು ಅಥವಾ ವ್ಯಕ್ತಿಯನ್ನು ಚಿಂತಿಸುವಾಗಲೂ ಒಂದೇ ವಿಷಯಕ್ಕೆ ಸಂಬಂಧಪಟ್ಟ ಹಲವಾರು ಆಲೋಚನೆಗಳು ಮನಸ್ಸಿಗೆ ಬರುತ್ತಿರುತ್ತವೆ. ಒಂದೇ ಗುಂಪಿನ ಹಸುಗಳು ಬೇರೆ ಹಸುವೊಂದನ್ನು ತಮ್ಮ ಗುಂಪಿಗೆ ಸೇರಿಸಿಕೊಳ್ಳುವುದಿಲ್ಲ, ಹಾಯ್ದು ಓಡಿಸುತ್ತವೆ. ಹಾಗೆಯೇ ಪ್ರಾಪಂಚಿಕ ವಿಷಯಗಳಿಂದ ತುಂಬಿದ ಮನಸ್ಸು ಭಗವಚ್ಚಿಂತನೆಯನ್ನು ಒಳಗೆ ಸೇರಿಸುವುದಿಲ್ಲ. ಒಂದು ಕೆಲಸ ಮಾಡುತ್ತಿರು ಎಂದು ಯಾರಿಗಾದರೂ ಹೇಳಿ, ಅವನು ಅದನ್ನು ಬಿಟ್ಟು ಬೇರೇನೋ ಮಾಡಲು ಹೋದರೆ ಅವನ ಮೇಲಿನ ವಿಶ್ವಾಸ ಹೊರಟುಹೋಗುತ್ತದೆ. ಆದರೆ ನಮ್ಮ ಮನಸ್ಸು ಯಾವಾಗಲೂ ಹಾಗೆಯೇ ಮಾಡುತ್ತದೆ. 'ಭಗವಚ್ಚಿಂತನೆ ಮಾಡು' ಎಂದು ಅದಕ್ಕೆ ಹೇಳಿದರೆ ಅದು ಆ ಕೆಲಸವನ್ನು ಬಿಟ್ಟು ಬೇರೆಲ್ಲವನ್ನೂ ಮಾಡುತ್ತದೆ. ಅದರ ಮೇಲೆ ವಿಶ್ವಾಸ ಇರಲಿ ಬಿಡಲಿ, ಅದನ್ನು ನಾವು ಬಿಡುವಂತಿಲ್ಲ, ಕಟ್ಟಿಕೊಂಡಾಗಿದೆ.

ಆದರೆ ಅಭ್ಯಾಸದ ಮೂಲಕ ಈ ಮನಸ್ಸಿನ ಸ್ವಭಾವವನ್ನು ಬದಲಾಯಿಸಬಹುದು. ಅಭ್ಯಾಸದ ವಿಷಯವಾಗಿ ಶ್ರೀರಾಮಕೃಷ್ಣರು ಹೀಗೆ ಹೇಳುತ್ತಾರೆ: ಬಿದಿರಿನಿಂದ ತಯಾರಿಸಿದ ಬೆಂಕಿಯು ಬೇಗ ಆರಿಹೋಗುತ್ತದೆ – ಅದಕ್ಕೆ ಮತ್ತೆ ಮತ್ತೆ ಬಿದಿರನ್ನು ಹಾಕುತ್ತಿರಬೇಕು. ಹಾಗೆಯೇ ನಿರಂತರ ಅಭ್ಯಾಸ ಬೇಕು. ಮುಂದೆ ಮನಸ್ಸಿನ ಸ್ವರೂಪವೇ ಬದಲಾಗಿ ಅದು ತನ್ನೊಳಗಿನ ಶಕ್ತಿಯಿಂದಲೇ ಉರಿಯತೊಡಗುತ್ತದೆ. ಭಗವಂತನೇ ಒಳಗಿನಿಂದ ಸ್ಫೂರ್ತಿಯ ಇಂಧನವನ್ನು ಒದಗಿಸುತ್ತಾನೆ. ಆಗ ಭಗವಚ್ಚಿಂತನೆ ನಿರಂತರವಾಗುತ್ತದೆ – ಅನನ್ಯವಾಗುತ್ತದೆ. ಶ್ರೀರಾಮಕೃಷ್ಣರು ಹೇಳುವಂತೆ ಮೂರು ವಿಧದ ಸಾಧನೆಗಳಿವೆ: ೧. ಹಕ್ಕಿಯಂತೆ ೨. ಮಂಗನಂತೆ ಮತ್ತು ೩. ಇರುವೆಯಂತೆ.

ಹಕ್ಕಿಯು ಹಾರುತ್ತಾ ಬಂದು ಕೊಂಬೆಯ ಮೇಲೆ ಕುಳಿತು ಕೊಂಡು ಹಣ್ಣನ್ನು ಕೊಕ್ಕಿನಿಂದ ಕುಕ್ಕತೊಡಗುತ್ತದೆ. ಆದರೆ ಬಹುಶಃ ಅಲುಗಾಟದಿಂದಾಗಿ ಹಣ್ಣು ಕೆಳಕ್ಕೆ ಬೀಳುತ್ತದೆ. ಹೀಗೆ ಹಕ್ಕಿಗೆ ಅದು ದಕ್ಕುವುದಿಲ್ಲ. ಹಾಗೆಯೇ ಕೆಲವು ಸಾಧಕರು ಆತುರದಲ್ಲಿ, ಜೋರಾಗಿ ಸಾಧನೆಯನ್ನು ಪ್ರಾರಂಭಿಸುತ್ತಾರೆ. ಇದರ ಪರಿಣಾಮವಾಗಿ ಸ್ವಲ್ಪ ಸಮಯದಲ್ಲಿಯೇ ಸಾಧನೋತ್ಸಾಹವನ್ನೇ ಕಳೆದುಕೊಳ್ಳುತ್ತಾರೆ. ಮಂಗ ಏನು



ಮಾಡುತ್ತದೆಯೆಂದರೆ ಬಾಯಲ್ಲಿ ಹಣ್ಣನ್ನು ಕಚ್ಚಿಕೊಂಡು ಒಂದು ಕೊಂಬೆಯಿಂದ ಇನ್ನೊಂದು ಕೊಂಬೆಗೆ ಹಾರುತ್ತಾ ಹೋಗುತ್ತದೆ. ಇದರ ಪರಿಣಾಮವಾಗಿ ಹಣ್ಣು ಬಾಯಿಯಿಂದ ಕಳಚಿ ಬಿದ್ದುಹೋಗಬಹುದು. ಹಾಗೆಯೇ ಆಧ್ಯಾತ್ಮಿಕ ಆದರ್ಶವನ್ನು ಗಟ್ಟಿಯಾಗಿ ಹಿಡಿದುಕೊಳ್ಳದಿದ್ದರೆ, ಜೀವನದ ಆಗುಹೋಗುಗಳ ವ್ಯತ್ಯಯದಿಂದಾಗಿ ಸಾಧನಾಪಥದಿಂದ ಸಾಧಕನು ದೂರವಾಗಬಹುದು. ಇರುವೆ ನಿಧಾನವಾಗಿ ಸ್ಥಿರವಾಗಿ ತನ್ನ ಆಹಾರ ಪದಾರ್ಥದ ಕಡೆ ಮುಂದುವರಿಯುತ್ತದೆ. ಮತ್ತೆ ಆ ಪದಾರ್ಥವನ್ನು ಬಾಯಲ್ಲಿ ಕಚ್ಚಿಕೊಂಡು ತನ್ನ ಗೂಡಿಗೆ ಹೋಗಿ, ಅಲ್ಲಿ ಬಿಡುವಿನಿಂದ ಅದನ್ನು ತಿಂದು ಸುಖಿಸುತ್ತದೆ. ಸಾಧಕನು ಈ ಮಾರ್ಗವನ್ನು ಅನುಸರಿಸುವುದು ಅತ್ಯುತ್ತಮ. ಇಲ್ಲಿ ಗುರಿಮುಟ್ಟುವ, ಫಲವನ್ನು ಅನುಭವಿಸುವ ಖಚಿತತೆ ಇದೆ.

ಸ್ವಾಮಿ ಯತೀಶ್ವರಾನಂದರು ಹೇಳುತ್ತಾರೆ: "ತೀವ್ರ ಪ್ರಯತ್ನದ ಮೂಲಕ ಮನಸ್ಸಿನಲ್ಲಿ ಒಂದು ಅಂತಃಸ್ರೋತವನ್ನು ಸೃಷ್ಟಿಸಬಹುದು. ಆಗ ಮನಸ್ಸು ಕೆಲಸದಲ್ಲಿ ನಿರತವಾಗಿರುವಾಗಲೂ ಅದರ ಒಂದು ಭಾಗ ಯಾವಾಗಲೂ ಭಗವಂತನೆಡೆಗೆ ಹರಿಯುತ್ತಿರುತ್ತದೆ. ಹೀಗೆ ಮನಸ್ಸಿಗೆ ಎರಡು ಧಾರೆಗಳಿರುತ್ತವೆ. ಈ ರೀತಿಯ ಇಬ್ಭಾಗ ಸಾಧ್ಯ ಮತ್ತು ಇದು ನಿರಂತರ ಆಧ್ಯಾತ್ಮಿಕ ಜೀವನಕ್ಕೆ ಆವಶ್ಯಕ... ಸಾಮಾನ್ಯವಾಗಿ ಅಂತಃಸ್ರೋತವು ವ್ಯರ್ಥ ಆಲೋಚನೆಗಳಿಂದ ತುಂಬಿದ ಅಪ್ರಜ್ಞಾಧಾರೆಯಾಗಿರುತ್ತದೆ. ನಾವು ಧ್ಯಾನದಲ್ಲಿ ಮಾಡಬೇಕಾದುದು ಏನೆಂದರೆ ಮೇಲ್ಮುಖ ಮತ್ತು ಕೆಳಮುಖ ಸ್ರೋತಗಳೆರಡನ್ನೂ ಒಂದಾಗಿಸುವುದು... ಆಧ್ಯಾತ್ಮಿಕ ಜೀವನವೆಂದರೆ ಮನಸ್ಸಿನ ಹೆಚ್ಚು ಭಾಗ ಜಾಗೃತಗೊಳ್ಳುವುದು" *(ಧ್ಯಾನ ಮತ್ತು ಆಧ್ಯಾತ್ಮಿಕ ಜೀವನ, ಪು. ೩೭೬–೭೭).* ಹೀಗೆ ಯಾವಾಗಲೂ ದೇವರೊಡನೆ ಇರುವುದನ್ನು ನಾವು ಕಲಿಯಬೇಕೆಂದು ಸ್ವಾಮಿ ಯತೀಶ್ವರಾನಂದರು ಹೇಳುತ್ತಾರೆ.

ಬ್ರದರ್ ಲಾರೆನ್ಸ್ ಎಂಬ ಕ್ರೈಸ್ತ ಸಂತರು ಹೀಗೆ ಹೇಳುತ್ತಾರೆ: "ದೇವರೊಡನೆ ಇರಬೇಕಾದರೆ ಯಾವಾಗಲೂ ಚರ್ಚ್‌ನಲ್ಲಿ ಇರಬೇಕಾದ ಆವಶ್ಯಕತೆಯಿಲ್ಲ. ನಾವು ನಮ್ಮ ಹೃದಯವನ್ನೇ ಮಂದಿರವನ್ನಾಗಿ ಮಾಡಿಕೊಳ್ಳಬಹುದು. ಆಗಾಗ ತಪ್ಪಿಸಿಕೊಂಡು ಅಲ್ಲಿಗೆ ಹೋಗಿ ಭಗವಂತನೊಡನೆ ಮೌನವಾಗಿ, ನಮ್ರವಾಗಿ ಮತ್ತು ಪ್ರೀತಿಯಿಂದ ಮಾತನಾಡಬಹುದು... ಪ್ರಾರ್ಥನೆಯ ಸಮಯವು ಬೇರೆ ಸಮಯದಿಂದ ಬೇರೆಯಾಗಿರಬೇಕೆಂದು ಭಾವಿಸುವುದು ದೊಡ್ಡ ತಪ್ಪು. ಪ್ರಾರ್ಥನೆಯ ಸಮಯದಲ್ಲಿ, ಪ್ರಾರ್ಥನೆಯ ಮೂಲಕ ದೇವರೊಡನೆ ಒಂದಾಗಿರುವುದು ಎಷ್ಟು ಮುಖ್ಯವೋ ಕೆಲಸದ ಸಮಯದಲ್ಲಿಯೂ ಕೆಲಸದ ಮೂಲಕ ಅವನೊಡನೆ ಒಂದಾಗಿರುವುದು ಅಷ್ಟೇ ಮುಖ್ಯ." *('Practice of Presence of God')*

ಭಗವಂತನ ಅನನ್ಯ ಚಿಂತನೆಗೆ ಕರ್ಮ ಒಂದು ಅಡಚಣೆ ಎಂದು ನಾವು ಭಾವಿಸುವುದುಂಟು. ಆದರೆ ಕರ್ಮವನ್ನು ಬಿಟ್ಟ ಮಾತ್ರಕ್ಕೆ ಅನನ್ಯ ಚಿಂತನೆ ಸಾಧ್ಯವಾಗುತ್ತದೆ ಎಂಬುದಕ್ಕೆ ಯಾವ ಭರವಸೆಯೂ ಇಲ್ಲ. ಕರ್ಮ ಮಾಡುವುದಕ್ಕೆ ಅಥವಾ ಮಾಡದೆ ಇರುವುದಕ್ಕೆ – ಎರಡಕ್ಕೂ ನಮ್ಮ ಇಚ್ಛೆಯನ್ನು ಪ್ರಯೋಗಿಸಬೇಕಾಗುತ್ತದೆ. ಎಲ್ಲಿ ಇಚ್ಛೆ ಅಥವಾ ಸಂಕಲ್ಪ ಇದೆಯೋ ಅಲ್ಲಿ ಕರ್ಮವಿರುತ್ತದೆ. ಆದ್ದರಿಂದ ಕರ್ಮ ಮಾಡುವುದು ಅಥವಾ ಮಾಡದಿರುವುದು ಎರಡೂ ಒಂದೇ. ಸ್ವಂತ ಇಚ್ಛೆ ಹೊರಟುಹೋದ ಮೇಲಂತೂ ಕರ್ಮ ಮತ್ತು ಅಕರ್ಮ ಎರಡೂ ಒಂದೇ ಆಗಿಬಿಡುತ್ತವೆ. ಕರ್ಮ ಮುಗಿದ ಮೇಲೆ ದೇವರನ್ನು ಚಿಂತಿಸುತ್ತೇನೆ ಎಂದು ಭಾವಿಸಿದರೆ ಅಂತಹ ಸಂದರ್ಭ ಬರುವುದೇ ಇಲ್ಲ.

**ಯ ಇಚ್ಛತಿ ಹರಿಂ ಸ್ಮರ್ತುಂ ವ್ಯಾಪಾರಾಸ್ತಗತೈರಪಿ ।**
**ಸಮುದ್ರೇ ಶಾಂತಕಲ್ಲೋಲೇ ಸ್ನಾತುಮಿಚ್ಛತಿ ದುರ್ಮತಿಃ ॥**

"ಯಾರು ಕೆಲಸಕಾರ್ಯಗಳೆಲ್ಲ ಮುಗಿದ ಮೇಲೆ ಹರಿಯನ್ನು ಸ್ಮರಿಸುತ್ತೇನೆ ಎಂದು ಭಾವಿಸುತ್ತಾನೆಯೋ, ಅವನು ಸಮುದ್ರದ ಅಲೆಗಳೆಲ್ಲ ಶಾಂತವಾದ ಮೇಲೆ ಸ್ನಾನಮಾಡುತ್ತೇನೆ ಎಂದು ಭಾವಿಸುವ ಮೂರ್ಖನಿಗೆ ಸಮಾನ."

ಈ ರೀತಿ ಅನನ್ಯ ಭಗವಚ್ಚಿಂತನೆಯೇ ಭಕ್ತಿಯೆಂದು ಶ್ರೀ ಮಧುಸೂದನ ಸರಸ್ವತಿಯವರು ವಿವರಿಸುತ್ತಾರೆ:

**ದ್ರುತಸ್ಯ ಭಗವದ್ಧರ್ಮಾತ್ ಧಾರಾವಾಹಿಕತಾಂ ಗತಾ ।**
**ಸರ್ವೇಶೇ ಮನಸೋ ವೃತ್ತಿಃ ಭಕ್ತಿರಿತ್ಯಭಿಧೀಯತೇ ॥**

"ಭಗವದ್‌ಸಂಬಂಧವಾದ ಚಟುವಟಿಕೆಗಳ ಮೂಲಕ ಮನಸ್ಸಿನ ವೃತ್ತಿಯು ಕರಗಿ ಭಗವಂತನ ಕಡೆಗೆ ನಿರಂತರವಾಗಿ ಪ್ರವಹಿಸತೊಡಗುತ್ತದೆ. ಇದನ್ನೇ ಭಕ್ತಿ ಎಂದು ಕರೆಯುವುದು."

ಈ ವಿಷಯವನ್ನು ಅರಗಿನ ಉದಾಹರಣೆಯ ಮೂಲಕ ಶ್ರೀ ಮಧುಸೂದನ ಸರಸ್ವತಿಗಳು ವಿವರಿಸುತ್ತಾರೆ: ಅರಗನ್ನು ಹಾಗೆಯೇ ಬಿಟ್ಟರೆ ನಿಧಾನವಾಗಿ ಶಿಥಿಲವಾಗುತ್ತದೆ. ಅದಕ್ಕೆ ಬೆಂಕಿ ತಗುಲಿದರೆ ಕರಗುತ್ತದೆ. ಅನಂತರ ಗಟ್ಟಿಯಾದಾಗ ಅದು ಹೊಸ ರೂಪವನ್ನು ಪಡೆಯುತ್ತದೆ. ಇನ್ನೊಮ್ಮೆ ಬೆಂಕಿ ತಗುಲಿದಾಗ ಇನ್ನೊಂದು ಆಕಾರವನ್ನು ಪಡೆಯಬಹುದು. ಅದನ್ನು ಕರಗಿಸಿ, ಅದಕ್ಕೆ ನಿರ್ದಿಷ್ಟ ಆಕಾರವನ್ನು ಕೊಟ್ಟು, ಮತ್ತೆ ಅದು ಬೆಂಕಿಯ ಸಂಪರ್ಕಕ್ಕೆ ಬರದಂತೆ ನೋಡಿಕೊಂಡರೆ ಆ ಆಕಾರ ಶಾಶ್ವತವಾಗಿ ಉಳಿಯುತ್ತದೆ. ನಮ್ಮ ಮನಸ್ಸು ಈ ಅರಗು ಇರುವಂತೆ. ಅದು ವಿಷಯಜಗತ್ತಿಗೆ ತೆರೆದುಕೊಂಡಿರುವುದರಿಂದ ಶಿಥಿಲವಾಗುತ್ತ ಹೋಗುತ್ತದೆ. ಯಾವುದೋ ಭಾವೋದ್ವೇಗದ ಬೆಂಕಿ ತಗುಲಿದಾಗ ಕರಗಿ ಆ ವಿಷಯದ ಆಕಾರವನ್ನು ಪಡೆಯುತ್ತದೆ. ಹೀಗೆ ಅದು ವಿವಿಧ ಭಾವವಶದಿಂದ ವಿವಿಧಾಕಾರವನ್ನು ಪಡೆಯುತ್ತದೆ. ಭಗವದ್‌ಭಕ್ತಿಯ ತಾಪಕ್ಕೆ ಅದನ್ನು ಒಳಪಡಿಸಿ ಅದು ಭಗವದಾಕಾರವನ್ನು ಪಡೆಯುವಂತೆ ಮಾಡಿ, ಮತ್ತೆ ಅದು ವಿಷಯಾಕಾರವನ್ನು ಪಡೆಯದಂತೆ ನೋಡಿಕೊಳ್ಳಬೇಕು. ಹೀಗೆ ಮನಸ್ಸಿನಲ್ಲಿ ಒಂದು ಭಗವದ್‌ವೃತ್ತಿ ರೂಪಿತವಾದರೆ ಭಗವಂತನ ಅನನ್ಯ ಚಿಂತನೆ ಸಾಧ್ಯವಾಗುತ್ತದೆ.

ಈ ರೀತಿ ಅನನ್ಯ ಭಗವಚ್ಚಿಂತನೆಯಲ್ಲಿ ತೊಡಗಿರುವವರ ಯೋಗಕ್ಷೇಮವನ್ನು ನಾನು ನೋಡಿಕೊಳ್ಳುತ್ತೇನೆ ಎಂದು ಭಗವಂತನು ಭರವಸೆ ನೀಡುತ್ತಾನೆ (೯:೨೨). ಎಲ್ಲ ರೀತಿಯಲ್ಲಿಯೂ ಅವನಿಗೆ ಭಗವಂತನೇ ಆಶ್ರಯವಾಗುತ್ತಾನೆ – ಭೌತಿಕವಾಗಿಯೂ ಕೂಡ. ಅಂತಹ ಭಕ್ತನ ಊಟಬಟ್ಟೆಗೆ ಯಾವ ಕೊರತೆಯೂ ಇಲ್ಲದಂತೆ ದೇವರು ನೋಡಿಕೊಳ್ಳುತ್ತಾನೆ. ಆದರೆ ದೇವರು ವಿಶೇಷ ಸೌಲಭ್ಯಗಳನ್ನಾಗಲಿ, ವಿಲಾಸ ವಸ್ತುಗಳನ್ನಾಗಲಿ ಅವನಿಗೆ ಒದಗಿಸುವುದಿಲ್ಲ; ಕೇವಲ ಕನಿಷ್ಠ ಮೂಲಭೂತ ಆವಶ್ಯಕತೆಗಳನ್ನಷ್ಟೇ ಒದಗಿಸುತ್ತಾನೆ. ಭಕ್ತನು ಅದಕ್ಕಿಂತ ಹೆಚ್ಚಿಗೆ ಇನ್ನೇನೂ ಬಯಸುವುದೂ ಇಲ್ಲ – ಯದೃಚ್ಛಾಲಾಭಸಂತುಷ್ಟನಾಗಿರುತ್ತಾನೆ. ಈ ದೇಹಕ್ಕೆ ಒಂದು ಸೌಲಭ್ಯವನ್ನು ಒದಗಿಸಿದರೆ ಅದು ಇನ್ನಷ್ಟು ಸೌಲಭ್ಯಗಳನ್ನು ಬಯಸುತ್ತದೆ. ಒಂದು ನಾಯಿಯು ಬರಿಯ ನೆಲದ ಮೇಲೆ ಆರಾಮವಾಗಿ ಮಲಗಿ ನಿದ್ರಿಸುತ್ತದೆ. ಅದಕ್ಕೆ ಒಂದು ಗೋಣಿ ಚೀಲವನ್ನು ಒದಗಿಸಿದರೆ ಅದು ಆ ಹಾಸಿಗೆಯ ಮೇಲೆಯೇ ಬಂದು ಮಲಗಲು ಪ್ರಾರಂಭಿಸುತ್ತದೆ. ಸಂತ ಥೆರೇಸಾ ಅವರು ಹೇಳುತ್ತಾರೆ: "ಈ ದೇಹದ ಒಂದು ದೋಷವೆಂದರೆ, ಅದಕ್ಕೆ ಹೆಚ್ಚು ಸೌಲಭ್ಯಗಳನ್ನು ಒದಗಿಸಿದಷ್ಟೂ ತನಗೆ ಆವಶ್ಯಕವಾದ ಹೆಚ್ಚು ಹೆಚ್ಚು ವಸ್ತುಗಳನ್ನು ಅದು ಕಂಡುಹಿಡಿಯುತ್ತ ಹೋಗುತ್ತದೆ." ಅವರು ಮತ್ತೆ ಹೇಳುತ್ತಾರೆ: "ನನ್ನಲ್ಲಿ ಅತ್ಯಂತ ಕಡಿಮೆ ಇದ್ದಾಗಲೇ ಚಿಂತೆಯೂ ಕಡಿಮೆ ಇರುತ್ತದೆ... ಯಾವುದಾದರೂ ವಸ್ತುವಿನ ಕೊರತೆಗಿಂತ, ಅದರ ಆಧಿಕ್ಯವೇ ನನ್ನನ್ನು ಕ್ಲೇಶಕ್ಕೆ ಒಳಪಡಿಸುತ್ತದೆ."

ಅನನ್ಯ ಭಗವಚ್ಚಿಂತನೆ ಮಾಡುವ ಭಕ್ತನಿಗೆ ಭಗವಂತನೇ ಎಲ್ಲ ಜ್ಞಾನವನ್ನೂ ಒದಗಿಸುತ್ತಾನೆ. ಅಂದರೆ ಅವನು ಮಹಾ ಪಂಡಿತನಾಗುತ್ತಾನೆ ಎಂದರ್ಥವಲ್ಲ. ಇಲ್ಲಿಯೂ ಅವನಿಗೆ ಆವಶ್ಯಕ ಜ್ಞಾನವನ್ನು ಭಗವಂತನು ಒದಗಿಸುತ್ತಾನೆ, ಮತ್ತು ಆ ಜ್ಞಾನವು ಅಧ್ಯಾತ್ಮ ಜ್ಯೋತಿಯಿಂದ ಬೆಳಗುತ್ತಿರುತ್ತದೆ. ಅನಕ್ಷರಸ್ಥರಾದ ಸ್ವಾಮಿ ಅದ್ಭುತಾನಂದರ ಮಾತುಗಳನ್ನು ಕೇಳಿ ದೊಡ್ಡ ದೊಡ್ಡ ವಿದ್ವಾಂಸರೂ ಆಶ್ಚರ್ಯದಿಂದ ತಲೆದೂಗುತ್ತಿದ್ದರು. ಶ್ರೀರಾಮಕೃಷ್ಣರು ಒಂದು ಉದಾಹರಣೆಯ ಮೂಲಕ ಇದನ್ನು ವಿವರಿಸುತ್ತಾರೆ: ಹಳ್ಳಿಯಲ್ಲಿ ಧಾನ್ಯವನ್ನು ಅಳತೆ ಮಾಡಿ ಚೀಲಕ್ಕೆ ತುಂಬಿಸುತ್ತಾರೆ. ಒಬ್ಬನು ಅಳತೆ ಮಾಡುತ್ತಿರುತ್ತಾನೆ, ಮತ್ತೊಬ್ಬನು ಅಳತೆಯ ಪಾತ್ರೆಗೆ ಧಾನ್ಯ ರಾಶಿಯಿಂದ ಧಾನ್ಯವನ್ನು ತಳ್ಳಿಕೊಡುತ್ತಿರುತ್ತಾನೆ. ಹಾಗೆಯೇ ದೇವರು ಬೇಕಾದ ವಿಷಯಗಳನ್ನು ಒದಗಿಸಿಕೊಡುತ್ತಾನೆ. ಭಾವನಾತ್ಮಕವಾಗಿಯೂ ಭಕ್ತನು ಯಾರ ಪ್ರೀತಿ ಸಹಾನುಭೂತಿಗಳನ್ನೂ ಬಯಸುವುದಿಲ್ಲ, ಸಂಪೂರ್ಣವಾಗಿ ದೇವರನ್ನೇ ಆಶ್ರಯಿಸುತ್ತಾನೆ. ದೇವರೇ ಅವನಿಗೆ ಮನಶ್ಶಾಂತಿಯನ್ನು ನೀಡುತ್ತಾನೆ. ಅವನು ಎಲ್ಲ ಭಾವನಾತ್ಮಕ ಕೊರತೆಯನ್ನೂ ನೀಗಿಸುತ್ತಾನೆ. ಭಕ್ತನು ತನ್ನ ಅಹಂಕಾರವನ್ನೂ ಭಗವಂತನಿಗೆ ಅರ್ಪಿಸಿರುವುದರಿಂದ ಅವನ ಆಧ್ಯಾತ್ಮಿಕ ಯೋಗಕ್ಷೇಮವನ್ನೂ ಭಗವಂತನೇ ನೋಡಿಕೊಳ್ಳುತ್ತಾನೆ – ಶ್ರೀರಾಮಕೃಷ್ಣರು ಗಿರೀಶಚಂದ್ರ ಘೋಷನ ವಕಾಲತ್ತನ್ನು ವಹಿಸಿಕೊಂಡಂತೆ. ಶ್ರೀರಾಮಾನುಜಾಚಾರ್ಯರು ಯೋಗಕ್ಷೇಮ ಶಬ್ದಕ್ಕೆ ಆಧ್ಯಾತ್ಮಿಕ ಅರ್ಥವನ್ನೇ ನೀಡುತ್ತಾರೆ. ಯೋಗ ಎಂದರೆ ಮತ್‌ಪ್ರಾಪ್ತಿ ಲಕ್ಷಣಂ – ಭಗವಂತನನ್ನು ಪಡೆಯುವಿಕೆ, ಹಾಗೂ ಕ್ಷೇಮ ಎಂದರೆ ಅಪುನರಾವೃತ್ತಿರೂಪಂ – ಪುನಃ ಈ ಸಂಸಾರಕ್ಕೆ ಹಿಂದಿರುಗದಿರುವಿಕೆ. ಯೋಗ ಎಂದರೆ ಒಂದಾಗುವಿಕೆ – ಭಗವಂತನೊಡನೆ ಒಂದಾಗುವಿಕೆ; ಭಗವತ್ಸಾನ್ನಿಧ್ಯದಲ್ಲಿಯೇ ಕ್ಷೇಮವಾಗಿರುವುದು – ಮತ್ತೆ ಈ ಸಂಸಾರಕ್ಕೆ ಹಿಂದಿರುಗುವ ಭಯವಿಲ್ಲ.

ಭಗವಂತನು ನಮ್ಮ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಾನೆ, ನಿಜ. ಅದಕ್ಕೆ ಅವನಿಗೆ ನಾವು ಏನು ಕೊಡಬೇಕು? ಅವನು ನಮ್ಮಿಂದ ನಿರೀಕ್ಷಿಸುವುದು ಅತ್ಯಲ್ಪ, ಏನೂ ಇಲ್ಲ ಎಂದರೂ ಸರಿ. ಯಾವ ಬಡವನಿಗೂ ಅದು ಅಸಾಧ್ಯವಲ್ಲ. ಅವನು ನಮ್ಮಿಂದ ಕೇಳುವುದು **ಪತ್ರ** (ಎಲೆ), **ಪುಷ್ಪ** (ಹೂವು), **ಹಣ್ಣು** ಮತ್ತು **ನೀರು** *(ಗೀತೆ, ೯:೨೬)*. ಇವು ಅತ್ಯಂತ ಸಾಮಾನ್ಯ ವಿಷಯಗಳು ಎಂದು ನಮಗನಿಸುತ್ತವೆ. ಆದರೆ ಬೆಳ್ಳಿ, ಬಂಗಾರಾದಿ ಸಂಪತ್ತಿಗಿಂತಲೂ ಇವು ಅತ್ಯಮೂಲ್ಯವಾದುವು. ಇವೆಲ್ಲವೂ (ನೀರನ್ನು ಬಿಟ್ಟು) ಸಸ್ಯವರ್ಗಕ್ಕೆ

ಸಂಬಂಧಿಸಿದವುಗಳು ಮತ್ತು ಸಸ್ಯಗಳನ್ನು ಆಧರಿಸಿಯೇ ಪ್ರಾಣಿಗಳು ಬದುಕಿರುವುದು. ನೀರಿಲ್ಲದೆ ಯಾರೂ ಬದುಕುವಂತೆಯೇ ಇಲ್ಲ. ಇಷ್ಟಾದರೂ ಸಂಪತ್ತಿಗಾಗಿ ನಾವು ಇಷ್ಟೊಂದು ಆಸೆಪಡುತ್ತೇವೆ – ಏನಾಶ್ಚರ್ಯ! ಇನ್ನೊಂದು ಅರ್ಥದಲ್ಲಿ ಈ ನಾಲ್ಕರ ಮೂಲಕ ಶ್ರೀಕೃಷ್ಣನು ನಮ್ಮ ಸರ್ವಸ್ವವನ್ನೂ ಬಯಸುತ್ತಾನೆ ಎಂದು ಹೇಳಬಹುದು. ಎಲೆ ಹೂ ಹಣ್ಣು ನೀರುಗಳು ನಮ್ಮ ಚತುರ್ವಿಧ ಅಂತಃಕರಣಗಳನ್ನು ಪ್ರತಿನಿಧಿಸುತ್ತವೆ ಎಂದು ಹೇಳಬಹುದು. ಎಲೆ ಆಲೋಚನಾ ಶಕ್ತಿಯನ್ನು ಸೂಚಿಸುತ್ತದೆ (ಸಂಕಲ್ಪ–ವಿಕಲ್ಪಾತ್ಮಕ ಮನಸ್). ಎಲೆ ಚಂಚಲವಾಗಿರುವಂತೆ ಮನಸ್ಸೂ ಚಂಚಲ. ಎಲೆಯು ಸೂರ್ಯನ ಬೆಳಕನ್ನು ಹೀರಿಕೊಂಡು ಆಹಾರವನ್ನು ತಯಾರಿಸುತ್ತದೆ. ಹಾಗೆಯೆ ಮನಸ್ಸು ವಿವಿಧ ವಿಷಯಕಿರಣಗಳನ್ನು ಸ್ವೀಕರಿಸಿ ಒಂದು ಆಲೋಚನಾ ಪ್ರಪಂಚವನ್ನೇ ಸೃಷ್ಟಿಸುತ್ತದೆ ಹಾಗೂ ಆಲೋಚನೆಯಿಲ್ಲದೆ ಯಾವ ಕಾರ್ಯವೂ ನಡೆಯುವಂತಿಲ್ಲ. ಹೂವು ಭಾವವನ್ನು ಸೂಚಿಸುತ್ತದೆ. ಹೂವು ಗಿಡಕ್ಕೆ ಉತ್ತಮ ಶೋಭೆಯನ್ನು ನೀಡುತ್ತದೆ. ಹಾಗೆಯೇ ಭಾವವಿಲ್ಲದೆ ನಮ್ಮ ಜೀವನ ಸಪ್ಪೆಯಾಗುತ್ತದೆ. ಆದ್ದರಿಂದಲೇ ಇಂಗ್ಲಿಷಿನಲ್ಲಿ ಒಂದು ಹೇಳಿಕೆಯಿದೆ: Emotions are like spices without which life would be dull (ಭಾವದ ಮಸಾಲೆಯಿಲ್ಲದಿದ್ದರೆ ಜೀವನ ಸಪ್ಪೆಯಾಗುತ್ತದೆ.) ಇನ್ನೊಂದು ಹೇಳಿಕೆ ಹೀಗಿದೆ: Life without emotion would be life without motion (ಭಾವಹೀನ ಜೀವನ ನಿಶ್ಚಲ.) ನಮ್ಮ ಅಂತಃಕರಣದ ಇನ್ನೊಂದು ಅಂಶ ಯಾವುದೆಂದರೆ, ನಮ್ಮ ಎಲ್ಲ ಕರ್ಮಗಳ ಫಲರೂಪವಾದ ಸಂಸ್ಕಾರಗಳ ಸಂಗ್ರಹ. ಮೂರನೆಯದಾದ ಫಲ ಅಥವಾ ಹಣ್ಣು ಇದನ್ನು ಸೂಚಿಸುತ್ತದೆ. ನೀರು ಪ್ರಾಣಶಕ್ತಿಯನ್ನು ಸೂಚಿಸುತ್ತದೆ. ನಮಗೆಲ್ಲರಿಗೂ ನೀರೇ ಪ್ರಾಣ. ಹೀಗೆ ನಮ್ಮ ದೇಹ ಮನಸ್ಸು ಪ್ರಾಣಗಳೆಲ್ಲವನ್ನೂ ಭಗವಂತನಿಗೆ ಸಮರ್ಪಿಸಿದರೆ ಅವನು ನಮ್ಮ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಾನೆ.

ಎಲೆ ಮುಂತಾದವುಗಳು ನಮ್ಮದಲ್ಲ, ನಮ್ಮ ಸೃಷ್ಟಿಯಲ್ಲ – ಅವು ಪ್ರಕೃತಿಯ ಸೃಷ್ಟಿ. ಅಂದರೆ ಭಗವದ್ವಸ್ತುವನ್ನು ಅವನಿಗೇ ನೀಡಿದಂತೆ. ಅವನಿಗೆ ನೀಡಬಹುದಾದ ನಮ್ಮದೇ ಆದ ವಸ್ತು ನಮ್ಮಲ್ಲಿ ಯಾವುದೂ ಇಲ್ಲ. ನಾವು ಅನೇಕ ವಸ್ತುಗಳನ್ನು ತಯಾರಿಸಬಹುದು. ಆದರೆ ಅವೆಲ್ಲವೂ ಆಗಲೇ ಇರುವ ಪ್ರಕೃತಿದತ್ತ ವಸ್ತುಗಳ ವಿವಿಧ ರೀತಿಯ ಬದಲಾವಣೆ ಮಾತ್ರ. ನಾವೇ ಹೊಸದಾಗಿ ಏನನ್ನೂ ಸೃಷ್ಟಿಸಲಾಗುವುದಿಲ್ಲ. ಪತ್ರ ಮುಂತಾದವುಗಳನ್ನು ಭಕ್ತಿಯಿಂದ ನೀಡಿದರೆ ಸ್ವೀಕರಿಸುತ್ತೇನೆ ಎಂದು ಭಗವಂತನು ಹೇಳುತ್ತಾನೆ. ನಾವು ನೀಡಬಹುದಾದದ್ದು ಕೇವಲ ಭಕ್ತಿ ಮಾತ್ರ. ಅಥವಾ ಭಕ್ತಿಯೂ ನಮ್ಮದಲ್ಲ, ಭಗವತ್‌ಸ್ವರೂಪವೇ ನಮ್ಮ ಹೃದಯದಲ್ಲಿ ಭಕ್ತಿರೂಪದಲ್ಲಿ ವ್ಯಕ್ತವಾಗುತ್ತದೆ. ನಾವು ಅದನ್ನು ವಿಷಯಪ್ರೀತಿಯ ರೂಪದಲ್ಲಿ ವ್ಯಕ್ತಪಡಿಸುತ್ತೇವೆ. ಅದನ್ನೇ ಭಗವಂತನ ಕಡೆಗೆ ತಿರುಗಿಸಿದರೆ ಅದು ಭಕ್ತಿಯಾಗುತ್ತದೆ.

**ಯಾ ಪ್ರೀತಿರಸ್ತಿ ವಿಷಯೇಷ್ವವಿವೇಕಭಾಜಾಮ್ ।**
**ಸೈವಾಚ್ಯುತೇ ಭವತಿ ಭಕ್ತಿಪದಾಭಿಧೇಯಾ ॥**

"ಅವಿವೇಕಿಗಳಿಗೆ ಪ್ರಾಪಂಚಿಕ ವಿಷಯದಲ್ಲಿ ಯಾವ ಪ್ರೀತಿ ಇರುತ್ತದೆಯೋ, ಅದನ್ನೇ ಭಗವಂತನ ಕಡೆಗೆ ಹರಿಸಿದರೆ, ಅದೇ ಭಕ್ತಿ ಎಂದು ಕರೆಯಲ್ಪಡುತ್ತದೆ."

ಆದ್ದರಿಂದ ನಾವು ಭಗವಂತನಿಗೆ ನೀಡುವಂತಹುದು ಏನೂ ಇಲ್ಲ – ಕೇವಲ 'ನಾನು' ಎಂಬ ಮಿಥ್ಯಾಭಾವವೊಂದೇ ಉಳಿದಿರುವುದು. ಅದನ್ನೂ ಬಿಟ್ಟುಬಿಡಬೇಕು ಎಂಬುದನ್ನು ಭಗವಂತನು ಇಲ್ಲಿ ಸೂಚಿಸುತ್ತಾನೆ. ಭಕ್ತಿಯ ಪ್ರಾರಂಭ ಹಂತದಲ್ಲಿ ವಸ್ತು ಮತ್ತು ಬಾಹ್ಯಕ್ರಿಯೆಗಳು ಪ್ರಧಾನವಾಗಿರುತ್ತವೆ. ವಿವಿಧ ಪದಾರ್ಥಗಳನ್ನು ಭಗವಂತನಿಗೆ ಅರ್ಪಿಸಬೇಕು, ವಿಸ್ತಾರವಾದ ಕ್ರಿಯಾವಿಧಿಗಳನ್ನು (ritual) ಆಚರಿಸಬೇಕು ಇತ್ಯಾದಿ ಇತ್ಯಾದಿ... ಆದರೆ ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿದಂತೆ ಬಾಹ್ಯ ವಸ್ತು ಮತ್ತು ಕ್ರಿಯೆಗಳು ಗೌಣವಾಗಿ ಭಾವವೇ ಪ್ರಧಾನವಾಗುತ್ತದೆ – ಸ್ಥೂಲದಿಂದ ಸೂಕ್ಷ್ಮದೆಡೆಗೆ ಹೋಗುತ್ತೇವೆ. ಏನನ್ನು ಅರ್ಪಿಸುತ್ತೇವೆ ಮತ್ತು ಮಾಡುತ್ತೇವೆ ಎಂಬುದು ಅಪ್ರಧಾನವಾಗಿ, ಯಾವ ಭಾವದಿಂದ ಅರ್ಪಿಸುತ್ತೇವೆ ಮತ್ತು ಮಾಡುತ್ತೇವೆ ಎಂಬುದು ಪ್ರಧಾನವಾಗುತ್ತದೆ. ಭಗವಂತನಿಗಾಗಿ ಯಾವ ಹೊಸ ಕರ್ಮವನ್ನೂ ನಾವು ಮಾಡಬೇಕಾಗಿಲ್ಲ. ತನಗಾಗಿ ಯಾವುದೇ ವಿಶೇಷವನ್ನೂ ಭಗವಂತನು ನಮ್ಮಿಂದ ಬಯಸುವುದಿಲ್ಲ. ನಾವು ಪ್ರತಿನಿತ್ಯ ಏನನ್ನು ಮಾಡುತ್ತೇವೆಯೊ, ಅದನ್ನು ಅವನಿಗೆ ಭಕ್ತಿಭಾವದಿಂದ ಅರ್ಪಿಸಿದರಾಯಿತು. *(ಗೀತೆ, ೯:೨೭)*

ಕರ್ಮದಲ್ಲಿ ಮೂರು ಹಂತಗಳಿವೆ. ತನಗಾಗಿ ಮಾಡುವುದು, ಇತರರಿಗಾಗಿ ಅಥವಾ ಸಮಾಜಕ್ಕಾಗಿ ಮಾಡುವುದು, ಹಾಗೂ ಭಗವಂತನಿಗಾಗಿ ಮಾಡುವುದು. ಇಲ್ಲಿ ಕರ್ಮ ಬದಲಾಗುವುದಿಲ್ಲ, ಅದರ ಹಿಂದಿರುವ ಭಾವ ಬದಲಾಗುತ್ತದೆ, ಅಷ್ಟೆ. ಒಂದು ಚಿಕ್ಕ ಮಗು ಸಂಪೂರ್ಣ ತನಗಾಗಿಯೇ ಇಡೀ ಜೀವನವನ್ನು ಬಾಳುತ್ತದೆ. ಇತರರಿಗಾಗಿ ನಾವು ಬಾಳುವುದನ್ನು ಕಲಿತಾಗ ನಮ್ಮ ವ್ಯಕ್ತಿತ್ವವು ವಿಸ್ತಾರವಾಗುತ್ತದೆ, ಅಹಂಕಾರದ ಕತ್ತಲೆ ಕೋಣೆಯಿಂದ, ಕಿರುವಲಯದಿಂದ ಹೊರಬಂದು ವಿಸ್ತಾರ ಜಗತ್ತಿನಲ್ಲಿ ವಿಹರಿಸಲು ತೊಡಗಿದಾಗ ಅದೇ ಪರಮಾನಂದ. ಆಗ ಜಗತ್ತನ್ನೂ ಮೀರಿಹೋಗಿ ವಿಶ್ವಚೇತನದೊಡನೆ ಒಂದಾಗುತ್ತೇವೆ. ಆಗ ನಾವು ಮಾಡುವ ಎಲ್ಲ ಕರ್ಮವೂ – ನಮಗಾಗಿ ಮತ್ತು ಸಮಾಜಕ್ಕಾಗಿ – ಭಗವತ್ಕಾರ್ಯವಾಗುತ್ತದೆ. ಆಗ ನಮಗೆ ಭಗವಂತನಿಂದ ಪ್ರತ್ಯೇಕತೆಯ ಭಾವವೇ ಇರುವುದಿಲ್ಲ. ನಾವು ಪೂರ್ಣದಿಂದ ಬೇರೆಯಾಗಿದ್ದಾಗ ನಶಿಸಿಹೋಗುವ ಸಂಭವವಿರುತ್ತದೆ. ಆದರೆ ಒಂದು ಹನಿ ಸಮುದ್ರದೊಡನೆ ಒಂದಾದಾಗ ಅದು ಅವಿನಾಶಿಯಾಗುತ್ತದೆ. ಆದ್ದರಿಂದಲೇ ಶ್ರೀಕೃಷ್ಣನು **ನ ಮೇ ಭಕ್ತಃ ಪ್ರಣಶ್ಯತಿ** – "ನನ್ನ ಭಕ್ತನಿಗೆ ನಾಶವಿಲ್ಲ" ಎಂದು ಪೂರ್ಣ ಭರವಸೆಯನ್ನು ನೀಡುತ್ತಾನೆ.



**ಇಂದಿನ ಯುವಜನತೆ ಸ್ವಾಮಿ ವಿವೇಕಾನಂದರ ಜೀವನ, ಸಂದೇಶಗಳನ್ನು ಓದಿ ಅವುಗಳಿಂದ ಸ್ಫೂರ್ತಿ ಪಡೆಯುವುದು ಹೊಸ ಜನಾಂಗದ ಪುನರುತ್ಥಾನ ಕಾರ್ಯದಲ್ಲಿ ನೆರವಾಗಬಹುದೆಂದು ತಿಳಿಸಿಕೊಟ್ಟಿರುವ ಲೇಖಕರು ಕನ್ನಡದ ಹಿರಿಯ ಸಾಹಿತಿಗಳು.**



# ಯುವ ಜನಾಂಗದ ಬಗ್ಗೆ ಸ್ವಾಮಿ ವಿವೇಕಾನಂದರು

ಡಾ॥ ಡಿ.ಕೆ. ರಾಜೇಂದ್ರ

ಸ್ವಾಮಿ ವಿವೇಕಾನಂದರು ಯುವಕರ ಮೇಲೆ ಹೆಚ್ಚು ಭರವಸೆ ಇಟ್ಟಿದ್ದರು. ಅವರ ಶಕ್ತಿ-ಸಾಮರ್ಥ್ಯದ ಬಗ್ಗೆ ಅವರಿಗೆ ಹೆಚ್ಚಿನ ವಿಶ್ವಾಸವಿತ್ತು. ಅವರು ಮನಸ್ಸು ಮಾಡಿದರೆ ಏನನ್ನಾದರೂ ಸಾಧಿಸಬಲ್ಲರು ಎಂಬ ನಂಬಿಕೆ ಸ್ವಾಮೀಜಿಯವರದಾಗಿತ್ತು. ಅದಕ್ಕಾಗಿ ಅವರು ತಮ್ಮ ಮಾತಿನ ಎಲ್ಲ ಸಂದರ್ಭಗಳಲ್ಲಿಯೂ ಯುವಕರನ್ನು ಹುರಿದುಂಬಿಸಿ, ಚೈತನ್ಯಶೀಲರನ್ನಾಗಿಸುವ ಮಾತುಗಳನ್ನು ಆಡುತ್ತ ಬಂದಿದ್ದಾರೆ. ಅವರು ಒಂದು ಕಡೆ ಹೇಳುತ್ತಾರೆ: "ನನ್ನ ನಂಬಿಕೆಯೆಲ್ಲವೂ ಯುವ ಪೀಳಿಗೆಯ ಮೇಲೆ, ಆಧುನಿಕ ಜನಾಂಗದ ಮೇಲೆ ಇದೆ. ಅವರಿಂದಲೇ ನನ್ನ ಕಾರ್ಯಕರ್ತರು ಹೊರಬರುತ್ತಾರೆ. ಅವರು ಸಿಂಹಗಳ ಹಾಗೆ ಇಡೀ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲು ಕಾರ್ಯತತ್ಪರರಾಗುತ್ತಾರೆ. ನಾನು ಒಂದು ಯೋಜನೆಯನ್ನು ರೂಪಿಸಿದ್ದೇನೆ. ನನ್ನ ಇಡೀ ಜೀವನವನ್ನು ಅದಕ್ಕಾಗಿ ಸಮರ್ಪಿಸಿದ್ದೇನೆ" ಎಂದು ಹೇಳಿ ಅದನ್ನು ಕಾರ್ಯರೂಪಕ್ಕೆ ತಂದು ಯಶಸ್ವಿಯಾದವರು ಸ್ವಾಮೀಜಿ.

ಯುವಜನರನ್ನು ಸಂಘಟಿಸಲು ಸ್ವಾಮೀಜಿ ಸಂಕಲ್ಪಿಸಿ ಅದಕ್ಕಾಗಿ ಇಡೀ ಭಾರತದ ಪರ್ಯಟನೆ ಮಾಡಿದರು. ತಮ್ಮ ಮಾತುಗಳಿಂದ ಅವರನ್ನು ಹುರಿದುಂಬಿಸಿ ಸತ್ಕಾರ್ಯಕ್ಕೆ ಪಣತೊಟ್ಟು ನಿಲ್ಲುವಂತೆ ಪ್ರೇರೇಪಿಸುವ ಕಾರ್ಯದಲ್ಲಿ ತೊಡಗಿದರು. ಅವರಲ್ಲಿ ಹುದುಗಿರುವ ಚೈತನ್ಯ ಜಾಗೃತಗೊಂಡು ಅವರು ಹೋರಾಟಕ್ಕೆ ಸಿದ್ಧರಾಗುವಂತೆ ಅವರಲ್ಲಿ ಆತ್ಮಸ್ಥೈರ್ಯವನ್ನು ತುಂಬುವ ಕೆಲಸ ಮಾಡಿದರು. "ನಾನು ಈ ಯುವಜನರನ್ನು ಸಂಘಟಿಸಲೆಂದೇ ಜನ್ಮವೆತ್ತಿದ್ದೇನೆ. ನೋಡುತ್ತಿರಿ, ಈಗ ಇರುವುದಕ್ಕಿಂತಲೂ ನೂರುಪಟ್ಟು ಹೆಚ್ಚು ಯುವಕರು ಪ್ರತಿಯೊಂದು ನಗರದಲ್ಲಿಯೂ ನನ್ನೊಡನೆ ಬರಲು ಸಿದ್ಧರಾಗುತ್ತಾರೆ" ಎಂಬ ಆತ್ಮವಿಶ್ವಾಸ ಅವರಲ್ಲಿತ್ತು. ಅಂತಹ ಒಂದು ಯುವ ಪೀಳಿಗೆಯ ದಂಡನ್ನೇ ಕಟ್ಟಿ ಅವರೆಲ್ಲರೂ ದೇಶದಾದ್ಯಂತ ಸತ್ಕಾರ್ಯಗಳಲ್ಲಿ ತೊಡಗುವಂತೆ ಮಾಡಿದರು.

ಯುವಕರ ಮೇಲೆಯೇ ಅವರು ಹೆಚ್ಚಿನ ಭರವಸೆ ಇಡಲು ಕಾರಣವೂ ಇತ್ತು. ರಾಮಕೃಷ್ಣ ಪರಮಹಂಸರು ಒಂದೆಡೆ ಹೇಳುವಂತೆ – "ಯುವಕರು ಹೊಸ ಮಡಕೆಯಂತೆ ಪರಿಶುದ್ಧರಾಗಿರುತ್ತಾರೆ. ಅದರಲ್ಲಿ ಏನನ್ನಾದರೂ ಧೈರ್ಯವಾಗಿ ತುಂಬಿಡಬಹುದು, ಹಾಳಾಗುವುದಿಲ್ಲ" ಎಂದು. ಹಾಗೆಯೇ ಅವರು ಇನ್ನೊಂದು ಕಡೆ ಹೇಳುತ್ತಾರೆ– "ಯುವಕರ ಮನಸ್ಸು ಹಸಿ ಗೋಡೆಯಂತೆ. ಅದರತ್ತ ಏನನ್ನಾದರೂ ಎಸೆದರೆ ತಕ್ಷಣ ನಾಟುತ್ತದೆ. ಆದರೆ ದೊಡ್ಡವರದು ಹಾಗಲ್ಲ, ಸ್ವಲ್ಪ ಸಮಯ ತೆಗೆದುಕೊಳ್ಳುತ್ತದೆ" ಎಂದು. ಯುವಕರು ಕುತೂಹಲ ಉತ್ಸಾಹಗಳ ಚಿಲುಮೆಯಾಗಿರುತ್ತಾರೆ. ಇವೆರಡನ್ನೂ ಚುರುಕಾಗಿಸಿಕೊಂಡಿರುವವರು ಯಾವುದಕ್ಕಾದರೂ ಕೂಡಲೇ ಸ್ಪಂದಿಸುತ್ತಾರೆ. ಅಂತಹವರಿಂದ ಯಾವುದೇ ಕೆಲಸವನ್ನು ಸುಲಭವಾಗಿ ಮಾಡಿಸಲು ಸಾಧ್ಯವಾಗುತ್ತದೆ.

ರಾಮಕೃಷ್ಣರಿಗೂ ಯುವಕರ ಬಗೆ ಅಪಾರವಾದ ಪ್ರೀತಿ ಇತ್ತು. ಸ್ವಾಮಿ ವಿವೇಕಾನಂದರನ್ನು ಅವರು ಶಿಷ್ಯನನ್ನಾಗಿ ಆಯ್ಕೆ ಮಾಡಿಕೊಂಡಿದ್ದು ಅವರಲ್ಲಿದ್ದ ಅಂತಹ ಅಗಾಧವಾದ ಶಕ್ತಿಯನ್ನು ಮನಗಂಡೇ. ನರೇಂದ್ರನನ್ನು ಕಂಡ ಕೂಡಲೇ ಅವರಲ್ಲಿ ಅಂತಹ ಭಾವನೆ ಮೂಡಿತು. ಆ ತರುಣನನ್ನು ಆಳವಾಗಿ ಪ್ರೀತಿಸತೊಡಗಿದರು. ಅದನ್ನು ಕಂಡು ರಾಮಕೃಷ್ಣರನ್ನು ಒಬ್ಬರು ಪ್ರಶ್ನಿಸಿದರು, "ಈ ಹುಡುಗರ ಬಗೆಗೆ ನೀವೇಕೆ ಇಷ್ಟೊಂದು ತಲೆ ಕೆಡಿಸಿಕೊಳ್ಳುತ್ತೀರಿ?" ಎಂದು. ಅದಕ್ಕೆ ಅವರು ಕೊಟ್ಟ ಉತ್ತರ: "ತರುಣರ ಮನಸ್ಸುಗಳಿಗೆ ಪ್ರಾಪಂಚಿಕತೆಯ ಬಣ್ಣವಿರುವುದಿಲ್ಲ. ಅವರು ಹುಟ್ಟಿನಿಂದಲೇ ಭಗವಂತನತ್ತ ಸೆಳೆಯಲ್ಪಟ್ಟಿರುತ್ತಾರೆ. ಅದು ಒಂದು ತೋಟದಂತೆ. ಅದನ್ನು ಸ್ವಚ್ಛಗೊಳಿಸುವಾಗ, ನೀವು ಇದ್ದಕ್ಕಿದ್ದಂತೆ ನೀರಿನ ಕೊಳವೆಯನ್ನು ನೋಡುತ್ತೀರಿ, ನಿಮ್ಮ ಪ್ರಯತ್ನವಿಲ್ಲದೆಯೇ ನೀರು ನುಗ್ಗುತ್ತದೆ." ಇಂತಹುದನ್ನು ಮನಗಂಡೇ ಪರಮಹಂಸರು ನರೇಂದ್ರನನ್ನು

ಶಿಷ್ಯನನ್ನಾಗಿ ಪಡೆದು, ಅವನು ಸ್ವಾಮಿ ವಿವೇಕಾನಂದರ ಸ್ಥಾನಕ್ಕೆ ಅರ್ಹರಾಗಲು ಕಾರಣರಾದರು.

ಸ್ವಾಮಿ ವಿವೇಕಾನಂದರಲ್ಲಿಯೂ ಇಂಥದೇ ಆಯ್ಕೆಯ ಗುಣ ಇದ್ದದ್ದನ್ನು ಕಾಣಬಹುದು. ಅಂತಹ ಯುವಸೈನ್ಯವನ್ನೇ ಅವರು ಕಟ್ಟಿದರು. ಅವರಲ್ಲಿ ತುಂಬು ಭರವಸೆ, ವಿಶ್ವಾಸ, ನಂಬಿಕೆ ಎಲ್ಲವನ್ನೂ ಇಟ್ಟರು. ಹಣಕ್ಕಾಗಿ ಅವರು ಎಂದೂ ಯೋಚಿಸಿದವರಲ್ಲ. ತಮ್ಮ ಮುಂದಿನ ಗುರಿ, ಆದರ್ಶಗಳಷ್ಟೇ ಅವರಿಗೆ ಮುಖ್ಯವಾಗಿದ್ದವು. ಅದನ್ನು ತಲುಪಲು ಬೇಕಾದದ್ದು ಮನಸ್ಸುಗಳೇ ಹೊರತು, ಹಣವಲ್ಲ ಎಂಬುದನ್ನು ಅವರು ತಿಳಿದಿದ್ದರು. ಮದ್ರಾಸಿನಲ್ಲಿ ಯುವಕರನ್ನುದ್ದೇಶಿಸಿ ಮಾಡಿದ ಒಂದು ಭಾಷಣದಲ್ಲಿ ಅದನ್ನು ಹೀಗೆ ವ್ಯಕ್ತಪಡಿಸಿದ್ದಾರೆ:

"ಮದ್ರಾಸಿನ ಯುವಕರೇ! ನನ್ನ ಭರವಸೆಯೆಲ್ಲಾ ನಿಮ್ಮ ಮೇಲಿದೆ. ನಿಮ್ಮ ದೇಶದ ಕಡೆಗೆ ಓಗೊಡುವಿರೇನು? ನನ್ನ ಮಾತಿನಲ್ಲಿ ನಿಮಗೆ ನಂಬಿಕೆ ಇದ್ದರೆ ನಿಮ್ಮಲ್ಲಿ ಪ್ರತಿಯೊಬ್ಬರಿಗೂ ಉಜ್ವಲವಾದ ಭವಿಷ್ಯವಿದೆ. ನಿಮ್ಮಲ್ಲಿ ನಿಮಗೆ ಅಪಾರವಾದ ನಂಬಿಕೆ ಬೆಳೆಯಲಿ. ಮಗುವಾಗಿದ್ದಾಗ ನನ್ನಲ್ಲಿ ಶ್ರದ್ಧೆ ಇತ್ತು. ಅದನ್ನೇ ನಾನೀಗ ಅನುಸರಿಸುವೆನು. ಪ್ರತಿಯೊಂದು ಜೀವಿಯ ಅಂತರಾಳದಲ್ಲಿ ಅನಂತಶಕ್ತಿ ಇರುವುದು ಎಂಬ ಆತ್ಮಶ್ರದ್ಧೆ ನಿಮ್ಮಲ್ಲಿರಲಿ. ನೀವು ಇಡೀ ಭರತಖಂಡವನ್ನು ಜಾಗೃತಗೊಳಿಸುವಿರಿ. ಆಗ ನಾವು ಜಗತ್ತಿನ ಎಲ್ಲಾ ದೇಶಗಳಿಗೂ ಹೋಗುವೆವು. ಜಗತ್ತಿನಲ್ಲಿ ರಾಷ್ಟ್ರಗಳನ್ನು ನಿರ್ಮಾಣ ಮಾಡುತ್ತಿರುವ ಶಕ್ತಿಯೊಂದಿಗೆ ನಮ್ಮ ಭಾವನೆಯೂ ಮಿಲನವಾಗುವುದು...ಈ ಕಾರ್ಯಕ್ಕೆ ನನಗೆ ಯುವಕರು ಬೇಕು. 'ಆಶಿಷ್ಠರೂ ಬಲಿಷ್ಠರೂ, ಆರೋಗ್ಯವಂತರೂ, ಬುದ್ಧಿವಂತರೂ ಆದಂತಹ ಯುವಕರು ಮಾತ್ರ ಭಗವಂತನನ್ನು ಪಡೆಯಬಹುದು' ಎಂದು ವೇದಗಳು ಸಾರುವುವು. ತಾರುಣ್ಯದ ಶಕ್ತಿ ಇರುವಾಗಲೇ ನಿಮ್ಮ ಭವಿಷ್ಯವನ್ನು ನಿರ್ಧರಿಸಬೇಕಾಗಿದೆ. ಮುದುಕರಾಗಿ ನಿತ್ರಾಣರಾದ ಮೇಲೆ ಅಲ್ಲ. ನವತಾರುಣ್ಯದ ಉತ್ಸಾಹದಲ್ಲಿ ಅದನ್ನು ನಿರ್ಧರಿಸಬೇಕಾಗಿದೆ. ಕೆಲಸ ಮಾಡಿ; ಈಗ ತಾನೇ ವಿಕಸಿತವಾದ, ಯಾರೂ ಮುಟ್ಟದ, ಆಘ್ರಾಣಿಸದ ಹೂವುಗಳನ್ನು ಭಗವಂತನ ಅಡಿದಾವರೆಯಲ್ಲಿಡುವುದಕ್ಕೆ ಇದೇ ಸಮಯ. ದೇವರು ಇದನ್ನು ಮಾತ್ರ ಪರಿಗ್ರಹಿಸುವುದು."

ಆತ್ಮವಿಶ್ವಾಸವನ್ನು ತುಂಬುವ ಮಾತಿನ ಕಿಡಿಗಳು ಸ್ವಾಮೀಜಿ ಅವರದ್ದು. ಆ ಕಿಡಿಗಳು ಪ್ರತಿಯೊಬ್ಬ ಯುವಕನ ಮನಸ್ಸನ್ನು ಹೊಕ್ಕು ಜ್ಯೋತಿಯಾಗಿ ಬೆಳಗಿದುದನ್ನು ನಾವು ಕಾಣುತ್ತೇವೆ. ಭರತಖಂಡದ ಬಗ್ಗೆ, ಅಲ್ಲಿಯ ಸಮಸ್ಯೆಗಳ ಬಗ್ಗೆ ಅರಿವನ್ನು ಮೂಡಿಸುವ ಕೆಲಸವನ್ನು ಅವರು ಪರಿಣಾಮಕಾರಿಯಾಗಿ ಮಾಡುತ್ತ ಬಂದರು. ಯುವಕರಿಗೆ ಮುಖ್ಯವಾಗಿ ಬೇಕಾದದ್ದು ಸರಿಯಾದ ಮಾರ್ಗದರ್ಶನ. ಒಳ್ಳೆಯದು, ಕೆಟ್ಟದರ ಅರಿವು. ಸ್ವಾಮೀಜಿಯವರು ಇಂತಹ ಅರಿವನ್ನು ಮೂಡಿಸಿ ದಾರಿತೋರುವ ಕಾರ್ಯದಲ್ಲಿ ನಿರಂತರ ಕೆಲಸ ಮಾಡುತ್ತ ಬಂದರು. ಯುವಶಕ್ತಿಯನ್ನು ಅವರು ಎಂದೂ ಕಡೆಗಣಿಸಿದವರಲ್ಲ. "ಯುವಕರೂ, ಶಕ್ತಿವಂತರೂ, ಬಲಿಷ್ಠರೂ, ದೃಢಕಾಯರೂ, ಬುದ್ಧಿಜೀವಿಗಳೂ ಆದವರು ಈ ಕೆಲಸವನ್ನು ಮಾಡಬೇಕಾಗಿದೆ" ಎಂದು ಹೇಳಿ, ಅಂತಹ ಶಕ್ತಿ ನಿಮ್ಮೆಲ್ಲರಲ್ಲಿಯೂ ಇದೆ ಎಂದು ಹುರಿದುಂಬಿಸುವ ಮಾತುಗಳಿಂದ ಯುವಕರನ್ನು ಸಿದ್ಧಗೊಳಿಸುವಲ್ಲಿ ಯಶಸ್ವಿಯಾಗುತ್ತಿದ್ದರು.

ಸ್ವಾಮೀಜಿ ಯುವಕರಲ್ಲಿ ಎಂದಿಗೂ ನಂಬಿಕೆ ಕಳೆದುಕೊಂಡು ನಿರಾಸೆಪಟ್ಟವರಲ್ಲ. ಯುವಶಕ್ತಿಯಿಂದ ಮಾತ್ರ ಏನನ್ನಾದರೂ ಸಾಧಿಸಲು ಸಾಧ್ಯ ಎಂಬ ದೃಢವಾದ ನಂಬಿಕೆ, ವಿಶ್ವಾಸ ಅವರದ್ದಾಗಿತ್ತು. ಆದ್ದರಿಂದಲೇ ಅವರು ಭಿನ್ನ ಭಿನ್ನ ರೀತಿಯಲ್ಲಿ ಅವರಿಗೆ ಕರೆ ನೀಡುತ್ತಿದ್ದರು. ಪರಿಸ್ಥಿತಿಯನ್ನು ವಿವರಿಸಿ ನಮಗಿಂದು ಬೇಕಾಗಿರುವುದರ ಬಗೆಗೆ ಎಚ್ಚರಿಸುವ ಮಾತುಗಳನ್ನಾಡುತ್ತಿದ್ದರು. ಸ್ವಾಮೀಜಿ ಹೋದಲ್ಲೆಲ್ಲಾ ಯುವಕರ ದಂಡೇ ಸೇರಿರುತ್ತಿತ್ತು. ಅವರ ಮಾತುಗಳನ್ನು ಕಿವಿಗೊಟ್ಟು ಆಲಿಸುತ್ತಿದ್ದರು. ಪಂಜಾಬಿನ ಯುವಜನತೆಯನ್ನು ಕುರಿತು ಮಾಡಿದ ಅವರ ಭಾಷಣ ಪ್ರಚೋದನಕಾರಿಯಾದುದಾಗಿತ್ತು, ಆವೇಶಭರಿತವಾದುದಾಗಿತ್ತು.

"ಲಾಹೋರ್ ನಗರದ ತರುಣರೇ, ಇದನ್ನು ತಿಳಿಯಿರಿ. ಈ ವಂಶಪಾರಂಪರ್ಯವಾಗಿ ಬಂದ ರಾಷ್ಟ್ರೀಯ ಮಹಾಪಾಪ ನಿಮ್ಮ ತಲೆಯ ಮೇಲಿದೆ ಎಂಬುದನ್ನು ತಿಳಿಯಿರಿ. ನಮಗೆ ಭರವಸೆಯೇ ಇಲ್ಲವಾಗಿದೆ. ನೀವು ಸಾವಿರಾರು ಸುಧಾರಕ ಸಂಘಗಳನ್ನು ಕಟ್ಟಬಹುದು. ಇಪ್ಪತ್ತು ಸಾವಿರ ರಾಜಕೀಯ ಸಭೆಗಳನ್ನು ಏರ್ಪಡಿಸಬಹುದು, ಐವತ್ತು ಸಾವಿರ ಸಂಸ್ಥೆಗಳನ್ನು ಕಟ್ಟಬಹುದು. ಆದರೆ ಸಹಾನುಭೂತಿ, ಪ್ರೀತಿ ಎಲ್ಲರಿಗಾಗಿಯೂ ಮಿಡಿಯುವ ಹೃದಯ ಇಲ್ಲದಿದ್ದರೆ ಈ ಸಂಸ್ಥೆಗಳಿಂದ ಯಾವ ಪ್ರಯೋಜನವೂ ಇಲ್ಲ. ಎಲ್ಲಿಯವರೆಗೆ ಬುದ್ಧನ ಹೃದಯವು ಮತ್ತೆ ಭರತಖಂಡದಲ್ಲಿ ಕಾಣಿಸಿಕೊಳ್ಳುವುದಿಲ್ಲವೋ, ಶ್ರೀಕೃಷ್ಣನ ಬೋಧನೆಯ ಅನುಷ್ಠಾನಕ್ಕೆ ಬರುವುದಿಲ್ಲವೋ ಅಲ್ಲಿಯವರೆಗೆ ನಮಗೆ ಭರವಸೆಯಿಲ್ಲ."

ಸ್ವಾಮೀಜಿ ಅವರ ಮನದಾಳದಲ್ಲಿ ಸದಾ ಮಿಡಿಯುತ್ತಿದ್ದದ್ದು, ಅವರನ್ನು ಕಾಡುತ್ತಿದ್ದದ್ದು ಬಡವರ ಸಮಸ್ಯೆ, ಅವರ ನೋವು, ಸಂಕಟ, ಅಸಹಾಯಕ ಸ್ಥಿತಿ. ಅದನ್ನು ನೋಡಿಕೊಂಡು ಸುಮ್ಮನಿರುವುದು ರಾಷ್ಟ್ರೀಯ ಪಾಪ ಎಂದೇ ಅವರು ಭಾವಿಸಿದ್ದರು. ಅದರ ಭಾರ ಪ್ರತಿಯೊಬ್ಬ ಭಾರತೀಯನ ತಲೆಯ ಮೇಲೆಯೂ ಇದೆ ಎಂದು ತಿಳಿದಿದ್ದರು. ಹಾಗಾಗಿ ಆ ಪಾಪದ ಹೊರೆಯನ್ನು ಇಳಿಸಿಕೊಳ್ಳಲು ಪ್ರತಿಯೊಬ್ಬರೂ ಶ್ರಮಿಸಬೇಕಾಗಿದೆ ಎಂಬ ಕರೆ ಅವರದ್ದಾಗಿತ್ತು. ಇದು ಒಬ್ಬೊಬ್ಬರಿಂದ ಆಗುವ ಕೆಲಸವಲ್ಲ ಎಂಬುದೂ ಅವರಿಗೆ ತಿಳಿದಿತ್ತು. ಅದಕ್ಕೆ ಬೇಕಾದದ್ದು ಹೆಚ್ಚಿನ ಶಕ್ತಿ. ಅಂತಹ

ಶಕ್ತಿಯನ್ನು ಕಂಡದ್ದು ಅವರು ಯುವಕರಲ್ಲಿ, ಸಾವಿಗೂ ಸಿದ್ಧರಾಗಿ ಮುನ್ನುಗ್ಗುವ ಯುವಕರ ತಂಡ ಅವರಿಗೆ ಬೇಕಾಗಿತ್ತು. ಅಂತಹವರಿಂದ ಮಾತ್ರ ಸದ್ಯದ ಪರಿಸ್ಥಿತಿಯನ್ನು ಸುಧಾರಿಸಲು ಸಾಧ್ಯ ಎಂಬ ಅರಿವು ಅವರಿಗಿತ್ತು. ಹಾಗಾಗಿ ಸಾವನ್ನು ಎಂದೂ ಅವರು ದೊಡ್ಡದಾಗಿ ಭಾವಿಸಿದವರಲ್ಲ. ತಮ್ಮೊಂದಿಗೆ ಕೈಜೋಡಿಸಿ ಬರುವವರಲ್ಲಿಯೂ ಸ್ವಾಮೀಜಿ ಅದನ್ನೇ ನಿರೀಕ್ಷಿಸುತ್ತಿದ್ದರು. ಅವರು ತಮ್ಮ ಒಂದು ಭಾಷಣದಲ್ಲಿ ಅದನ್ನು ಹೇಳಿದ್ದು ಹೀಗೆ:

"ಈ ಸಣ್ಣ ಜೀವ ಹೋದರೇನಂತೆ? ಪ್ರತಿಯೊಬ್ಬರೂ ಸಾಯಲೇಬೇಕು. ಮಹರ್ಷಿಯಾಗಲಿ, ಪಾಪಿಯಾಗಲಿ, ಶ್ರೀಮಂತರಾಗಲಿ, ಬಡವರಾಗಲಿ ಯಾರ ದೇಹವೂ ಶಾಶ್ವತವಲ್ಲ. ಎದ್ದೇಳಿ! ಎಚ್ಚರಗೊಳ್ಳಿ! ಸಂಪೂರ್ಣ ಪ್ರಾಮಾಣಿಕರಾಗಿರಿ, ನಮ್ಮ ದೇಶದಲ್ಲಿ ಅಪ್ರಾಮಾಣಿಕತೆ ಭಯಂಕರವಾಗಿದೆ. ನಮಗಿಂದು ಬೇಕಾಗಿರುವುದು ಶೀಲ, ಪ್ರಾಣ ಹೋದರೂ ಹಿಂಜರಿಯದೆ ಕಾರ್ಯವನ್ನು ಸಾಧಿಸುವ ದೃಢಚಿತ್ತ."

ಸ್ವಾಮೀಜಿ ಪರಿವ್ರಾಜಕರಾಗಿ ಬರಿಗಾಲಿನಲ್ಲಿ ಸಮಗ್ರ ಭಾರತವನ್ನು ಸುತ್ತಾಡಿ ಅಲ್ಲಿಯ ನೋವು, ಸಂಕಟಗಳನ್ನು ಕಂಡು ನೊಂದವರು, ಅದರ ಪರಿಹಾರಕ್ಕಾಗಿ ಅವರು ಆಶ್ರಯಿಸಿದ್ದು ಮತ್ತು ನಂಬಿದ್ದು ಯುವಚೇತನವನ್ನು. 'ಯುವ ಚೇತನವೇ ರಾಷ್ಟ್ರಚೇತನ' ಎಂಬ ದೃಢ ವಿಶ್ವಾಸ ಅವರದಾಗಿತ್ತು. ಅವರಲ್ಲಿ ತುಂಬು ಉತ್ಸಾಹ ಇರುತ್ತದೆ. ಆದರೆ ಅನುಭವದ ಕೊರತೆ ಇರುತ್ತದೆ ಎಂಬ ಅರಿವೂ ಅವರಿಗಿತ್ತು. ಹಾಗಾಗಿ ಅವರಿಗೆ ಮಾರ್ಗದರ್ಶನದ ಆವಶ್ಯಕತೆಯಿದೆ ಎಂಬುದನ್ನು ಮನಗಂಡಿದ್ದ ಸ್ವಾಮೀಜಿಯವರು ಯುವಕರ ಸಂಘಟನೆಯಲ್ಲಿ ತೊಡಗಿ ಚೈತನ್ಯ ತುಂಬುವ ಕೆಲಸದಲ್ಲಿ ತೊಡಗಿದರು. "ಎಲ್ಲಕ್ಕಿಂತ ಮೊದಲು ನಮ್ಮ ಯುವಕರು ಶಕ್ತಿಶಾಲಿಗಳಾಗಬೇಕು" ಎಂಬುದು ಸ್ವಾಮೀಜಿಯವರ ಆಶಯವಾಗಿತ್ತು. ಅದನ್ನೊಂದು ಘೋಷಣೆಯಾಗಿ ಮತ್ತೆ ಮತ್ತೆ ತಮ್ಮ ಉಪನ್ಯಾಸಗಳಲ್ಲಿ ಒತ್ತಿ ಒತ್ತಿ ಹೇಳುತ್ತಿದ್ದರು. ಶಕ್ತಿಯೇ ಜೀವನ, ಶಕ್ತಿಯೇ ಎಲ್ಲವೂ ಎಂಬುದು ಅವರ ನಂಬಿಕೆ. ಎಲ್ಲ ಕೆಲಸಕಾರ್ಯಗಳಿಗೂ ಬೇಕಾದದ್ದು ಶಕ್ತಿಯೇ, ನಂತರ ಎಲ್ಲವೂ ಸಾಧ್ಯವಾಗುತ್ತದೆ ಎಂಬುದನ್ನು ತಮ್ಮ ಅನುಭವದಿಂದ ಮನಗಂಡಿದ್ದರು. ಶಕ್ತಿ ಮತ್ತು ಮುನ್ನುಗ್ಗುವ ಮನಸ್ಸು ಇದ್ದಾಗ ಮಿಕ್ಕ ಯಾವುದೂ ಅಡ್ಡಿಯಾಗಲಾರದು. "ಹಣ ಮನುಷ್ಯನನ್ನು ತಯಾರು ಮಾಡುವುದನ್ನು ಯಾರು ನೋಡಿರುವರು? ಮನುಷ್ಯನೇ ಯಾವಾಗಲೂ ಹಣವನ್ನು ಮಾಡುವುದು" ಎಂದು ಅವರು ಹೇಳುತ್ತಿದ್ದರು. ಯಾವುದೋ ನೆಪವನ್ನೊಡ್ಡಿ ಕೈಕಟ್ಟಿ ಕೂರುವವರನ್ನು ಕಂಡು ಸ್ವಾಮೀಜಿ ಇಂತಹ ಮಾತುಗಳನ್ನಾಡಿರಬಹುದು. ಕೆಲವರು ಮಾತೆತ್ತಿದರೆ "ಹಣವೆಲ್ಲಿದೆ?" ಎಂಬ ಅಪಸ್ವರವನ್ನು ಎತ್ತುತ್ತಿದ್ದು ದಕ್ಕೆ ಇದು ಉತ್ತರವಿರಬೇಕು.

ಯುವಕರಲ್ಲಿರಬೇಕಾದ ಶಕ್ತಿಯ ಬಗ್ಗೆ ಸ್ವಾಮೀಜಿ ಒಂದು ಕಡೆ ಹೇಳಿರುವ ಮಾತುಗಳು ಕೆಲವರಿಗೆ ಅಚ್ಚರಿ ಹುಟ್ಟಿಸಬಹುದು, ಇನ್ನು ಹಲವರಿಗೆ ಇರಿಸುಮುರುಸಾಗಿ ತೋರಬಹುದು. ಆದರೆ ಆ ಮೂಲಕ ಅವರು ವಾಸ್ತವಿಕ ಸಂಗತಿಯನ್ನು ಹೊರಗೆಡಹಿದ್ದಾರೆ ಎಂಬುದನ್ನು ಅರ್ಥಮಾಡಿಕೊಳ್ಳಲು ನಮಗೂ ವಾಸ್ತವದ ಅರಿವಿರಬೇಕಾಗುತ್ತದೆ. ಸ್ವಾಮೀಜಿ ಹೇಳುತ್ತಾರೆ: "ಓ ನನ್ನ ಯುವ ಸ್ನೇಹಿತರೇ, ಮೊದಲು ಬಲಶಾಲಿಗಳಾಗಿ, ನಿಮಗೆ ನಾನು ನೀಡುವ ಸಲಹೆ ಇದು. ಭಗವದ್ಗೀತೆಯನ್ನು ಓದುವುದಕ್ಕಿಂತಲೂ ಫುಟ್‌ಬಾಲ್ ಆಟದಿಂದ ನೀವು ಸ್ವರ್ಗಕ್ಕೆ ಹತ್ತಿರವಾಗುತ್ತೀರಿ. ಇವು ಕೆಚ್ಚೆದೆಯ ಮಾತುಗಳು. ಆದರೆ ನಾನು ಅವನ್ನು ಹೇಳಲೇಬೇಕಾಗಿದೆ. ಏಕೆಂದರೆ, ನಾನು ನಿಮ್ಮನ್ನು ಪ್ರೀತಿಸುತ್ತೇನೆ. ಸಮಸ್ಯೆ ಎಲ್ಲಿದೆ ಎಂದು ನನಗೆ ಗೊತ್ತು. ನಾನು ಸ್ವಲ್ಪ ಅನುಭವವನ್ನೂ ಪಡೆದುಕೊಂಡಿದ್ದೇನೆ. ನಿಮ್ಮ ತೋಳುಗಳು ಹಾಗೂ ಮಾಂಸಖಂಡಗಳು ಬಲವನ್ನು ಸ್ವಲ್ಪ ಹೆಚ್ಚಿಸಿಕೊಳ್ಳುವುದರಿಂದ, ನೀವು ಭಗವದ್ಗೀತೆಯನ್ನು ಚೆನ್ನಾಗಿ ಅರ್ಥಮಾಡಿಕೊಳ್ಳುವಿರಿ."

ಇಂತಹ ಮಾತುಗಳನ್ನಾಡಲು "ಕೆಚ್ಚೆದೆ ಬೇಕು" ಎಂದು ಸ್ವಾಮೀಜಿಯವರೇ ಹೇಳಿಕೊಳ್ಳುತ್ತಾರೆ. ಹಾಗೆಯೇ ಅದರ ಹಿಂದಿರುವ ಸತ್ಯವನ್ನು ಅವರೇ ಬಿಚ್ಚಿಡುತ್ತಾರೆ. ಬಲಶಾಲಿಯಾದ ವ್ಯಕ್ತಿಯ ಮನಸ್ಸು ಆರೋಗ್ಯಕರವಾಗಿರುತ್ತದೆ, ಆರೋಗ್ಯಕರವಾದ ಮನಸ್ಸಿದ್ದರೆ ಏನನ್ನಾದರೂ ಆಲೋಚಿಸಲು, ಆಲೋಚಿಸಿದ್ದನ್ನು ಕಾರ್ಯರೂಪಕ್ಕೆ ತರಲು ಸಹಾಯವಾಗುತ್ತದೆ. ದೇಹದ ಆರೋಗ್ಯಕ್ಕೂ ಮನಸ್ಸಿನ ಆರೋಗ್ಯಕ್ಕೂ ಸಂಬಂಧವಿರುವುದನ್ನು ಸ್ವಾಮೀಜಿ ಚೆನ್ನಾಗಿ ಅರಿತಿದ್ದರು. 'ಭಗವದ್ಗೀತೆ ಓದುವುದಕ್ಕಿಂತ ಫುಟ್‌ಬಾಲ್ ಆಡಿ' ಎಂಬ ಅವರ ಕರೆ ಕೆಲವರಿಗೆ ಕಿವಿಯಲ್ಲಿ ಕೆಂಡ ಸುರಿದಂತೆ ಅನಿಸಿದರೂ ಅದರ ಉದ್ದೇಶ ಮಾತ್ರ ಸ್ಪಷ್ಟ ನೇರ. ಅದು ಬಂದೂಕಿನಿಂದ ಗುಂಡು ಹಾರಿದ ಹಾಗೆ, ಹಾರಿದ ಗುಂಡು ಗುರಿಯನ್ನು ತಲುಪಲೇಬೇಕು. ಈ ಸಾಧನೆಯ ಹಾದಿಯಲ್ಲಿ ಅವರು ಅದೆಷ್ಟೋ ಕಷ್ಟಗಳನ್ನು ಅನುಭವಿಸಿದರು, ಅವಮಾನಗಳನ್ನು ಎದುರಿಸಿದರು. ಅದರಲ್ಲಿ ನೋವು, ನರಳಾಟ, ಬಡತನ, ಸುಲಿಗೆ ಮುಂತಾದ ಅನುಭವಗಳು ಅನೇಕ ಬಗೆಯವು. ಭರತಖಂಡವನ್ನು ಇವುಗಳಿಂದ ರಕ್ಷಿಸಬೇಕೆಂಬುದೇ ಅವರ ಏಕೈಕ ಗುರಿಯಾಗಿತ್ತು. ಹಾಗಾಗಿಯೇ ಅವರು ಯುವಕರನ್ನುದ್ದೇಶಿಸಿ ಮತ್ತೆ ಮತ್ತೆ ಹೇಳುತ್ತಾರೆ: "ಓ ನನ್ನ ವೀರ ಬಾಲಕರೆ, ನೀವೆಲ್ಲರೂ ಮಹತ್ಕಾರ್ಯವನ್ನು ಮಾಡಲು ಹುಟ್ಟಿದ್ದೀರಿ ಎಂಬ ಶ್ರದ್ಧೆ ನಿಮ್ಮಲ್ಲಿರಲಿ. ಕುನ್ನಿಗಳ ಬೊಗಳುವಿಕೆಯು ನಿಮ್ಮನ್ನು ಭಯಪಡಿಸದಿರಲಿ. ಇಲ್ಲ, ಇಲ್ಲ, ಆಗಸದ ಮಿಂಚು ಗುಡುಗುಗಳೂ ಸಹ. ಅದಕ್ಕೆ ಬದಲು ನೀವು ಎದ್ದು ನಿಂತು ಕೆಲಸ ಮಾಡಿ" ಎಂಬ ಧೈರ್ಯತುಂಬುವ ಮಾತುಗಳು ಅವರಿಂದ ಯಾವಾಗಲೂ ಕೇಳಿಬರುತ್ತಿದ್ದವು.

ರಾಷ್ಟ್ರೀಯ ಜಾಗೃತಿಯನ್ನುಂಟುಮಾಡುವುದು ಸ್ವಾಮೀಜಿಯವರ ಮುಖ್ಯ ಉದ್ದೇಶವಾಗಿತ್ತು. ಅವರ ದೃಷ್ಟಿಯಲ್ಲಿ

ರಾಷ್ಟ್ರೀಯ ಜಾಗೃತಿ ಎಂದರೆ ಜನರಲ್ಲಿ ಆ ಭಾವನೆಯನ್ನು ಜಾಗೃತಗೊಳಿಸುವುದು. ಪ್ರತಿಯೊಬ್ಬರ ಮನದಲ್ಲಿಯೂ ಆ ಭಾವನೆ ಮೂಡಬೇಕೆಂಬುದು ಅವರ ಆಶಯ. ಅದಕ್ಕಾಗಿ ಅವರು ಮೊದಲು ಕೈಹಾಕಿದ್ದು ಜನಜಾಗೃತಿಯ ಕಡೆಗೆ. ಜನ ಜಾಗೃತಿಗೊಂಡರೆ, ರಾಷ್ಟ್ರ ತಾನಾಗಿಯೇ ಜಾಗೃತಗೊಳ್ಳುತ್ತದೆ ಎಂಬುದನ್ನು ಅವರು ಮನಗಂಡಿದ್ದರು. ಮುಂದುವರಿದು ಅವರು ಹೇಳುತ್ತಾರೆ: "ಒಬ್ಬ ಇಂಗ್ಲಿಷ್ ಹುಡುಗ ನಿಮಗೆ ಹೇಳುವನು, ನಾನೊಬ್ಬ ಇಂಗ್ಲಿಷರವನು, 'ನಾನು ಏನು ಬೇಕಾದರೂ ಮಾಡಬಲ್ಲೆ' ಎಂದು. ಅಮೆರಿಕದ ಹುಡುಗ ನೊಬ್ಬ ನಿಮಗೆ ಹೀಗೆಯೇ ಹೇಳುತ್ತಾನೆ. ಹಾಗೆಯೇ ಒಬ್ಬ ಯುರೋಪಿನ ಹುಡುಗ ಕೂಡ. ನಮ್ಮ ಹುಡುಗರು ಹೀಗೆಯೇ ಹೇಳುತ್ತಾರೇನು? ಇಲ್ಲ, ಆ ಹುಡುಗರ ಅಪ್ಪಂದಿರೂ ಹಾಗೆ ಹೇಳುವುದಿಲ್ಲ. ಏಕೆಂದರೆ ನಾವು ನಮ್ಮ ಮೇಲಿನ ಶ್ರದ್ಧೆಯನ್ನು ಕಳೆದುಕೊಂಡಿರುವೆವು!" ರಾಷ್ಟ್ರಪ್ರೇಮ, ರಾಷ್ಟ್ರಭಕ್ತಿ, ರಾಷ್ಟ್ರವನ್ನು ಕುರಿತಾದ ಶ್ರದ್ಧೆ ನಮ್ಮಲ್ಲಿ ಬಡವಾಗಿರುವುದು ಇಷ್ಟಕ್ಕೆಲ್ಲ ಕಾರಣ ಎಂಬ ನೋವು ಸ್ವಾಮೀಜಿಯವರಲ್ಲಿತ್ತು. ಇದಕ್ಕೆ ಕಾರಣರಾದ ಎಲ್ಲರನ್ನೂ ಅವರು ದೂಷಿಸುತ್ತಾರೆ. ಆತ್ಮಾಭಿಮಾನವಿಲ್ಲದೆ ಬದುಕುವವರ ಬಗೆಗೆ ಅವರಲ್ಲಿ ತಿರಸ್ಕಾರ, ರೋಷ, ದ್ವೇಷ, ಎಲ್ಲವೂ ಇದೆ. ಹಿಂದಿನವರು ಇದನ್ನೆಲ್ಲ ಹೇಳಿಕೊಟ್ಟು ಬೆಳೆಸಿದ್ದರೆ ಇಂದು ಹೀಗಾಗುತ್ತಿರಲಿಲ್ಲ ಎಂಬ ಕೊರಗು ಅವರಲ್ಲಿದೆ. ಅದಕ್ಕಾಗಿ ಅವರು ನಂಬಿದ್ದು ತರುಣ ಜನಾಂಗವನ್ನು, ಅದರಲ್ಲಿಯೂ ಧೈರ್ಯ ಸಾಹಸಗಳಿಗೆ ಹೆಸರಾದ ಬಲಶಾಲಿಗಳನ್ನು. ಭಾರತದ ಪುನರ್ನಿರ್ಮಾಣಕ್ಕಾಗಿ ಪ್ರತಿಯೊಬ್ಬರಲ್ಲಿಯೂ ಸ್ವಾಭಿಮಾನವನ್ನು ಬಿತ್ತಿ ಬೆಳೆಸುವುದಕ್ಕೆ ಸ್ವಾಮೀಜಿ ಪಣತೊಟ್ಟು ನಿಂತರು.

೧೮೯೪ರಲ್ಲಿ ಚಿಕಾಗೊದಿಂದ ಮದ್ರಾಸಿನ ತಮ್ಮ ತರುಣ ಶಿಷ್ಯರಿಗೆ ಬರೆದ ಪತ್ರದಲ್ಲಿ ಸ್ವಾಮೀಜಿ ಅದನ್ನು ಸ್ಪಷ್ಟಪಡಿಸಿದ್ದಾರೆ. "ಪ್ರತಿಯೊಬ್ಬನ ಮನೆಬಾಗಿಲಿಗೂ ಉಚ್ಚ ಧ್ಯೇಯಗಳನ್ನು ಕೊಂಡೊಯ್ಯುವ ವ್ಯವಸ್ಥೆಯೊಂದನ್ನು ಚಲಿಸುವಂತೆ ಮಾಡುವುದೇ ನನ್ನ ಜೀವನದ ಹೆಬ್ಬಯಕೆ. ಅನಂತರ ಪುರುಷರು, ಸ್ತ್ರೀಯರು ತಮ್ಮ ಅದೃಷ್ಟವನ್ನು ತಾವೇ ರೂಪಿಸಿಕೊಳ್ಳಲಿ. ಜೀವನದ ಮಹತ್ತಾದ ಪ್ರಶ್ನೆಗಳ ಮೇಲೆ ನಮ್ಮ ಪುರಾತನರು ಮತ್ತು ಅನ್ಯದೇಶೀಯರು ಏನು ಆಲೋಚಿಸುವರು ಎಂಬುದನ್ನು ಮೊದಲು ನೋಡಲಿ. ಅನಂತರ ಏನು ಮಾಡಬೇಕೆಂಬುದನ್ನು ನಿಶ್ಚಯಿಸಲಿ. ನಾವು ರಾಸಾಯನಿಕ ವಸ್ತುಗಳನ್ನು ಮಿಶ್ರಣ ಮಾಡೋಣ, ಪ್ರಕೃತಿ ನಿಯಮದಂತೆ ಅನಂತರ ಅದೇ ಹರಳುಗಟ್ಟುವುದು. ಕಷ್ಟಪಟ್ಟು ಕೆಲಸ ಮಾಡಿ, ಚಂಚಲರಾಗದಿರಿ, ದೇವರಲ್ಲಿ ನಂಬಿಕೆಯಿಟ್ಟು ಕಾರ್ಯಪ್ರವೃತ್ತರಾಗಬೇಕು. ಈಗಲೋ ಆಗಲೋ ನಾನು ಬರುತ್ತೇನೆ. ಧರ್ಮವನ್ನು ಅಲ್ಲಗಳೆಯದೆ ಜನಸಾಮಾನ್ಯರ ಉನ್ನತಿ ಆಗಬೇಕು ಎಂಬ ಆದರ್ಶವನ್ನು ಮರೆಯಬೇಡಿ."

ಸ್ವಾಮೀಜಿ ಕನಸುಮನಸಿನಲ್ಲಿಯೂ ಜಪಿಸುತ್ತಿದ್ದದ್ದು ಭರತಖಂಡವನ್ನು, ಅಲ್ಲಿಯ ಜನರನ್ನು ಹಾಗೂ ಆದರ್ಶಗಳನ್ನು. ಹೇಗೋ ಗುರಿಸಾಧನೆ ಮಾಡುವುದು ಅವರ ಗುರಿಯಾಗಿರಲಿಲ್ಲ. ಹಾಗಾಗಿಯೇ "ಧರ್ಮವನ್ನು ಅಲ್ಲಗಳೆಯದೆ ಜನಸಾಮಾನ್ಯರ ಉನ್ನತಿ ಆಗಬೇಕು" ಎಂಬ ಎಚ್ಚರದ ಮಾತುಗಳನ್ನು ಆಡುತ್ತಾರೆ. ತರುಣರಿಗೆ ಗುರಿಯಷ್ಟೇ ಮುಖ್ಯವಾಗಿರುತ್ತದೆ. ಆ ಉತ್ಸಾಹದಲ್ಲಿ ಏನನ್ನಾದರೂ ಮಾಡಿ ಗುರಿ ತಲುಪಲು ಮುಂದಾಗುವ ಭಯ ಅವರಲ್ಲಿತ್ತು. ಆದರೆ ಸ್ವಾಮೀಜಿಯವರ ಆದರ್ಶ ಇದ್ದದ್ದು ಗುರಿಯಷ್ಟೇ ಅಲ್ಲ, ಅದನ್ನು ತಲುಪುವ ಮಾರ್ಗವೂ ಮುಖ್ಯ ಎಂಬುದು. ಇದಕ್ಕಾಗಿ ಆದರ್ಶವನ್ನು- ಅಧ್ಯಾತ್ಮವನ್ನು ಅವರು ಎಂದೂ ಕೈಬಿಡಲಿಲ್ಲ.

ಸ್ವಾಮೀಜಿ ತಮ್ಮ ಸಾಧನೆಯ ಹಾದಿಯಲ್ಲಿ ಬರಿಯ ತಪ್ಪುಗಳನ್ನಷ್ಟೇ ಹುಡುಕುತ್ತ ಹೋಗಲಿಲ್ಲ. ಜೊತೆ ಜೊತೆಯಲ್ಲಿಯೇ ಅದಕ್ಕೆ ಪರಿಹಾರವನ್ನೂ ಕಂಡುಕೊಳ್ಳುತ್ತ ಹೋದರು. "ಪಾಪ ಯಾವುದು ಎಂಬುದನ್ನು ಯಾರೂ ತೋರಿಸಬಲ್ಲರು. ಆದರೆ ಆ ಕಷ್ಟದಿಂದ ಪಾರಾಗುವ ದಾರಿ ಯಾವುದು ಎಂಬುದನ್ನು ಕಂಡು ಹಿಡಿಯುವವನೇ ಮಾನವತೆಯ ಮಿತ್ರ" ಎಂಬ ಅವರ ಮಾತುಗಳಲ್ಲಿ ಇದು ವ್ಯಕ್ತವಾಗುತ್ತದೆ. ಮಾನವೀಯತೆಯ ಅರಿವನ್ನು ಯುವಕರಲ್ಲಿ ಬಿತ್ತುವ ಮೂಲಕ ಸಾಮಾಜಿಕ ಕಾರ್ಯಗಳಲ್ಲಿ ಸಮರ್ಪಣ ಭಾವದಿಂದ ಅವರು ತೊಡಗಿಕೊಳ್ಳುವಂತೆ ಮಾಡಿದರು. ಸ್ವಾಮೀಜಿಯವರದ್ದು ಸರ್ವತೋಮುಖ ವ್ಯಕ್ತಿತ್ವದ ನಿರ್ಮಾಣದ ದೃಷ್ಟಿಯಾಗಿತ್ತು. "ಧೈರ್ಯವುಳ್ಳ ಇಚ್ಛಾಶಕ್ತಿಯ ಬಲವುಳ್ಳ, ಬಲಿಷ್ಠರಾದ ನೂರು ನವ ಯುವಕರನ್ನು ನನಗೆ ಕೊಡಿ, ಆಗ ನಾನು ಭಾರತ ದೇಶದ ನವನಿರ್ಮಾಣವನ್ನು ಮಾಡಬಲ್ಲೆ" ಎಂಬ ಆತ್ಮವಿಶ್ವಾಸ ಅವರಲ್ಲಿತ್ತು. ಸ್ವಾಮೀಜಿ ತಮ್ಮ ಅಪೂರ್ವ ಸಂಘಟನಾಶಕ್ತಿಯಿಂದ ಅಂಥ ಮಹತ್ಕಾರ್ಯವನ್ನು ಮಾಡಿ ಅದರಲ್ಲಿ ಯಶಸ್ವಿಯೂ ಆದರು. "ನಿದ್ರಿಸಲು ಇದು ಸಮಯವಲ್ಲ. ಸಹೋದರರೇ, ಮಾಡಬೇಕಾದ ಕಾರ್ಯ ಬಹಳವಿದೆ" ಎಂಬ ಅವರ ಕರೆ ಮಾಂತ್ರಿಕ ನುಡಿಯಂತೆ ಕೆಲಸ ಮಾಡಿದ್ದಂತೂ ನಿಜ. ಅದು ಸ್ವಾಮೀಜಿಯವರ ವ್ಯಕ್ತಿತ್ವದಿಂದ ಸಿಡಿದು ಬಂದದ್ದು. ಮೊದಲು ನಿದ್ರಿಸುವವರನ್ನು ಎಬ್ಬಿಸದೆ ಮುನ್ನುಗ್ಗುವುದು ತಕ್ಕ ಫಲವನ್ನು ನೀಡದು. ಸ್ವತಃ ಸ್ವಾಮೀಜಿ ಅದನ್ನು ಕುರಿತು ಹೀಗೆ ಹೇಳಿದ್ದಾರೆ: "ನಮಗಿಂದು ಬೇಕಾಗಿರುವುದು ಎಲ್ಲವನ್ನು ತ್ಯಾಗ ಮಾಡಿ, ದೇಶದ ಸಲುವಾಗಿ ತಮ್ಮ ಬಾಳನ್ನೇ ಮುಡಿಪಾಗಿಡುವ ಯುವಕರು. ಮೊದಲು ನಾವು ಅವರ ಜೀವನವನ್ನು ರೂಪಿಸಬೇಕು. ಅನಂತರವಷ್ಟೇ ನಾವು ಅವರಿಂದ ಯಾವುದೇ ರಚನಾತ್ಮಕವಾದ ಕೆಲಸವನ್ನು ನಿರೀಕ್ಷಿಸಬಹುದು."





# ಜೀವನ ಮಕರಂದ

('ಬದುಕಲು ಕಲಿಯಿರಿ' ಪುಸ್ತಕದ ಸಂಗ್ರಹ)

ಮೂಲ ಲೇಖಕರು : ಸ್ವಾಮಿ ಜಗದಾತ್ಮಾನಂದ ಸಂಗ್ರಹ : ಡಾ. ಜಿ.ವಿ. ಕುಲಕರ್ಣಿ

ಅಧ್ಯಾಯ ಏಳು

## ಪ್ರಾರ್ಥನೆಯಿಂದ ಪರಿವರ್ತನೆ

**"ದೇವರಲ್ಲಿ ಅಚಲ ಶ್ರದ್ಧೆ ನಿಜವಾಗಿಯೂ ಅದ್ಭುತಗಳನ್ನೇ ಮಾಡಬಲ್ಲದು. ಅಂಥಾ ಶ್ರದ್ಧಾವಂತನೇ ಸರ್ವಶಕ್ತನು. ಆ ಶ್ರದ್ಧೆ ಇಲ್ಲದಾತನೇ ನಿಶ್ಶಕ್ತನು. ಖಂಡಿತವಾಗಿಯೂ ಶ್ರದ್ಧೆಯೇ ಜೀವನ; ಅಶ್ರದ್ಧೆಯೇ ಮರಣ."**

**–ಶ್ರೀ ರಾಮಕೃಷ್ಣ ಪರಮಹಂಸ**

**"ನಮ್ಮ ಹೃದಯಾಂತರಾಳದ ದೈವತ್ವವನ್ನು ಜಾಗೃತಗೊಳಿಸುವುದೇ ಪ್ರಾರ್ಥನೆಯ ಉದ್ದೇಶ. ಪ್ರಾರ್ಥನೆಯ ಅದ್ಭುತ ಪ್ರಭಾವವನ್ನು ಉಂಡವನು ಅನ್ನವಿಲ್ಲದೆ ಅನೇಕ ದಿನ ಬದುಕಬಹುದು. ಆದರೆ ಪ್ರಾರ್ಥನೆ ಇಲ್ಲದೆ ಅರೆಗಳಿಗೆಯೂ ಬದುಕಿರಲಾರ. ಪ್ರಾರ್ಥನೆಯೇ ಆತನ ಬಾಳಿನ ಉಸಿರು."**

**–ಮಹಾತ್ಮಾ ಗಾಂಧಿ**

ದೇವರಲ್ಲಿ ಮೊರೆ, ಇದುವೇ ಪ್ರಾರ್ಥನೆಯ ನಿಜವಾದ ಅಂತರಾರ್ಥ. ದೇವರು ದಯಾಮಯ, ಕರುಣಾಕರ, ಸರ್ವಕರ್ತ, ಸರ್ವಶಕ್ತ. ನಮ್ಮ ಹೃದಯದಲ್ಲಿಯ ರಕ್ತವನ್ನು ಪಂಪ್ ಮಾಡುವವನು ದೇವರು. ಅವನಿಗೆ ಆಸ್ತಿಕ ನಾಸ್ತಿಕ ಎಂಬ ಭೇದಭಾವವಿಲ್ಲ. ದೇವರು ಶಾಂತಿ ಸಮಾಧಾನಗಳ ಬೀಡು, ಆನಂದದ ತವರು, ಸಂತೋಷದ ಸಾಗರ. ಆತನ ಕೃಪೆಗೆ ಇತಿಮಿತಿ ಇದೆಯೆ? ಆತನೊಲಿದರೆ ಕೊರಡು ಕೊನರುವುದು, ಬರಡು ಹಯನವಾಗುವುದು.

ದೇವರೆಡೆಗಿನ ಯಾತ್ರೆಯನ್ನೇ ಸಾಧನೆ ಎನ್ನುವುದು. ಒಂದೇ ಗುರಿಯೆಡೆಗೆ ಸಾಗುವ ವಿವಿಧ ಮಾರ್ಗಗಳಂತೆ ಈ ಸಾಧನೆಯಲ್ಲೂ ವೈವಿಧ್ಯಗಳಿವೆ. ಪ್ರಾರ್ಥನೆ ಅವುಗಳಲ್ಲೊಂದಷ್ಟೆ. ಇದು ಆಂತರ್ಯದ ಪರಿಶುದ್ಧತೆಗೆ ಸುಲಭವಾದ ಮಾರ್ಗ. ಜಪ, ಧ್ಯಾನ, ಭಜನೆ, ಸಾಷ್ಟಾಂಗ ನಮನ, ಸ್ತೋತ್ರಪಾರಾಯಣ, ವ್ರತ ನಿಯಮ ಪರಿಪಾಲನೆ, ಪೂಜೆ ಪುನಸ್ಕಾರಗಳೆಲ್ಲವೂ ಈ ಮಾರ್ಗದ ಕವಲುಗಳಷ್ಟೆ.

ಪರಿಶುದ್ಧತೆಗಾಗಿ ಪ್ರಾರ್ಥನೆಯ ಕ್ರಮ ಇಂದು ನಿನ್ನೆಯದಲ್ಲ. ವೈದಿಕಯುಗದಿಂದಲೂ ಪ್ರಚಲಿತವಾದದ್ದೆ. **ಸರ್ವೇ ಜನಾಃ ಸುಖಿನೋ ಭವಂತು,** ಬೃಹದಾರಣ್ಯಕೋಪನಿಷತ್ತಿನ ಅಭ್ಯಾರೋಹ ಮಂತ್ರ **ಅಸತೋ ಮಾ ಸದ್ಗಮಯ, ತಮಸೋ ಮಾ ಜ್ಯೋತಿರ್ಗಮಯ, ಮೃತ್ಯೋರ್ಮಾ ಅಮೃತಂ ಗಮಯ,**



ಅಷ್ಟೇ ಏಕೆ, ಧೀಶಕ್ತಿ ಬೆಳಗುವ **ಗಾಯತ್ರೀ ಮಂತ್ರ** – ಇವೆಲ್ಲ ಇದಕ್ಕೆ ನಿದರ್ಶನಗಳು. ಆದರೆ ವಿಚಾರವಾದದ ಅಲೆ ಎದ್ದು ಪ್ರಾರ್ಥನಾಧರ್ಮಕ್ಕೆ ಗ್ರಹಣ ಹಿಡಿದಂತಾಯಿತು.

ಶ್ರೀರಾಮಕೃಷ್ಣ ಪರಮಹಂಸರ ಪದತಲದಲ್ಲಿ ಕುಳಿತು ಶ್ರದ್ಧೆಯಿಂದ ಅವರ ವಚನಾಮೃತವನ್ನು ಆಲಿಸಿ, ಅಂತಃಕರಣಪೂರ್ವಕವಾಗಿ ಅವರ ಸೇವೆಯನ್ನು ಮಾಡಿದ ಸ್ವಾಮಿ ಅದ್ಭುತಾನಂದರು ಒಬ್ಬ ಭಕ್ತನ ಮನಸ್ಸನ್ನು ಪರಿವರ್ತಿಸಿದರು:

ವಿಭೂತಿಬಾಬು ಒಂದು ದಿನ ಕಾಶಿಯಲ್ಲಿ ತಮ್ಮ ಹಿರಿಯರೊಡನೆ ಮಾತನಾಡುತ್ತ ಕಾಶಿಯ ವಿಶ್ವನಾಥ ದೇವಾಲಯದಲ್ಲಿ 'ಶಿವನ ಸಾನ್ನಿಧ್ಯವೆ, ಮತ್ತೇನು? ಎಲ್ಲ ಬರಿ ನಂಬಿಕೆಯ ಭ್ರಾಂತಿ!' ಎಂದು ಗೇಲಿ ಮಾಡಿದರು. ಸಂಜೆ ಅವರು ಅದ್ಭುತಾನಂದರನ್ನು ನೋಡಲು ಬರುತ್ತಿರುವಾಗಲೇ ಅವರ ಧ್ವನಿ ಮೊಳಗಿತು. "ಎಂಥ ಮೂರ್ಖತೆ! ವಿಶ್ವನಾಥನ ಸಾನ್ನಿಧ್ಯವನ್ನು ತಿಳಿಯಲು ನೀನು ಏನು ತಪಸ್ಸು, ಸಾಧನೆಗಳನ್ನು ಮಾಡಿರುವೆ? ಅದಕ್ಕೆ ಬೇಕಾದ ಪವಿತ್ರತೆ, ವ್ಯಾಕುಲತೆಗಳು ನಿನ್ನಲ್ಲಿವೆಯೆ?" ಎಂದು ಅವರು ದೃಢಸ್ವರದಲ್ಲಿ ಹೇಳಿದರಂತೆ. ವಿಭೂತಿಬಾಬುಗಳು ಚಕಿತರಾಗಿ ತಮ್ಮ ಸಂಶಯದ ಮಾತುಗಳಿಗಾಗಿ ಪಶ್ಚಾತ್ತಾಪಪಟ್ಟು ವಿನಮ್ರಭಾವದಿಂದ ಅದ್ಭುತಾನಂದರಿಗೆ ಪ್ರಣಾಮ ಮಾಡಿದಾಗ ಅವರು ಏನೂ ತಿಳಿಯದಂತೆ ನಕ್ಕು, 'ವಿಶ್ವನಾಥ ಮಂದಿರಕ್ಕೆ ಹೋಗಿ ಪೂಜೆ ಸಲ್ಲಿಸಿ ತೀರ್ಥಪ್ರಸಾದ ತೆಗೆದುಕೊಂಡು ಬಾ' ಎಂದು ಹೇಳಿದರಂತೆ.

ಚಿತ್ತರಂಜನ ಮೊಹಂತಿ ಎಂಬವರು ಬಿ.ಎ. ಪದವೀಧರರು. ಅವರು ವಾಸುದೇವಪುರ ಎಂಬಲ್ಲಿ ಅಧ್ಯಾಪಕರು. ೧೯೬೮ರಲ್ಲಿ ಅವರಿಗೆ ಸನ್ನಿಪಾತ ಜ್ವರ ಬಂತು. ಕಣ್ಣು ಹೋದವು, ಅವರು ಕುರುಡರಾಗಿ ಅಧ್ಯಾಪಕ ವೃತ್ತಿ ಬಿಡಬೇಕಾಗಿ ಬಂತು. ಚಿಕಿತ್ಸೆಗಾಗಿ ಅವರು ಕುಟುಂಬ ರಕ್ಷಣೆಗಾಗಿ ಇದ್ದ ಸ್ವಲ್ಪ ಆಸ್ತಿ ಮಾರಿದರು. ದೂರದ ಒರಿಸ್ಸಾದ ಬಲಸೋರ್ ಜಿಲ್ಲೆಯ ಒಂದು ಗ್ರಾಮವನ್ನು ಸೇರಿದರು. ೧೯೭೪ರ ಶ್ರಾವಣ ಮಾಸದಲ್ಲಿ ಅವರು ಬಲಸೋರಿನ ಶ್ರೀಚಂದನೇಶ್ವರ ದೇವಾಲಯದಲ್ಲಿ ಆರು ದಿನ ಎಡೆಬಿಡದೆ ದೇವರನ್ನು ಪ್ರಾರ್ಥಿಸಿದರಂತೆ. ಕೊನೆಯ ದಿನ ರಾತ್ರಿ ಶಿವನು ಅವರಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡು ಹೇಳಿದನಂತೆ, " ನೀನು ಹಿಂದಿನ ಜನ್ಮದಲ್ಲಿ ತಂದೆತಾಯಿಗಳ ಏಕಮಾತ್ರ ಪುತ್ರನಾಗಿದ್ದೆ. ಒಂದು ದಿನ ನಿನ್ನ ತಾಯಿ ಹರಗೌರೀ ಪೂಜೆಗೆ ಹೂವು, ಆರತಿ, ನೈವೇದ್ಯ ಸಿದ್ಧಮಾಡಿ ಇಡುತ್ತಿದ್ದಾಗ ನೀನು ಎಲ್ಲೋ ನೋಡುತ್ತ ಅವನ್ನು ತುಳಿದುಬಿಟ್ಟೆ. ನಿನ್ನ ತಾಯಿ ಕುಪಿತಳಾಗಿ, 'ಇಷ್ಟು ಬೆಳಕಿರುವಲ್ಲಿ ಇವನ್ನು ಕಾಣಲಾರದವ ನೀನು ಕುರುಡನಾಗು' ಎಂದಳು. ನಿನ್ನ ಪೂರ್ವಜನ್ಮದ ತಂದೆತಾಯಿ ಈಗ ಬಲಸೋರ್ ಜಿಲ್ಲೆಯ ಬಂಪದಾ ಎಂಬಲ್ಲಿ ಗಣನಾಥ ಬೇಹಾರ ಮತ್ತು ಲಕ್ಷ್ಮೀದೇವಿ ಎಂಬ ಹೆಸರಿನಿಂದ ಇದ್ದಾರೆ. ನೀನು ಶಿವರಾತ್ರಿಯ ದಿನ ಬಂಪದಾಕ್ಕೆ ಸಮೀಪದಲ್ಲಿರುವ ಜಾರೀಶ್ವರ ದೇವಸ್ಥಾನದ ಕೆರೆಯಲ್ಲಿ ಮಿಂದು, ಆ ಕೆರೆಯ ನೀರನ್ನೇ ತೆಗೆದುಕೊಂಡು ಹೋಗಿ ಗಣನಾಥ ಬೇಹಾರ ಅವರ ಮನೆಯಲ್ಲಿ ಹರಗೌರೀ ಪೂಜೆ ನಡೆಸು. ಅನಂತರ ಗಣನಾಥ ಬೇಹಾರ ಮತ್ತು ಲಕ್ಷ್ಮೀದೇವಿ ನಿನ್ನನ್ನು ಮುಟ್ಟಲಿ. ಒಡನೆಯೇ ನಿನ್ನ ದೃಷ್ಟಿ ಬರುವುದು."

ಶಿವನ ಆದೇಶದಂತೆ ಮೊಹಂತಿ ನಡೆದುಕೊಂಡ. ಸ್ವಪ್ನದ ವಿಚಾರ ಇತರರಿಗೆ ತಿಳಿಸಿ ಅವರ ಸಹಾಯದಿಂದ ಶಿವರಾತ್ರಿಯ ದಿನ ಭಕ್ತಿಯಿಂದ ಪೂಜೆ ಮಾಡಿದ. ಆ ಪೂಜೆಯನ್ನು ನೋಡಲು ಸಾವಿರಾರು ಜನ ಸೇರಿದ್ದರಂತೆ. ಪೂಜೆಯ ನಂತರ ಬೇಹಾರ ದಂಪತಿಗಳು ಮೊಹಂತಿಯನ್ನು ಮುಟ್ಟಿ ಹರಸಿದರು. ಎಲ್ಲರ ಸಮ್ಮುಖದಲ್ಲಿ ಅವನ ದೃಷ್ಟಿ ಮರಳಿ ಬಂತು. ನಂತರ ಅವರು ಅಲ್ಲಿ ಹರದೇವಿ ದೇವಾಲಯ ಕಟ್ಟಿಸಲು ನಿಶ್ಚಯಿಸಿದರು. ಅಲ್ಲಿ ಜನಜಾತ್ರೆ ನೆರೆಯಿತು. ಈ ಕತೆ 'ರಾಷ್ಟ್ರದೀಪ' ಎಂಬ ಒರಿಯಾ ಪತ್ರಿಕೆಯಲ್ಲಿ ಪ್ರಕಟವಾಯಿತು. (೨೧-೩-೧೯೭೦)

ಕರ್ನಾಟಕದ ಸಂತಶ್ರೇಷ್ಠರಲ್ಲಿ ಒಬ್ಬರಾದ ಜಗನ್ನಾಥದಾಸರು ಮೊದಲು ಘನವಿದ್ವಾಂಸರಾಗಿದ್ದರು. ನಂತರ ಅವರು ವಿನಮ್ರ ಭಕ್ತರಾಗಿ ಪರಿವರ್ತನೆಗೊಂಡ ಕತೆ ರೋಚಕವಾಗಿದೆ. ಅವರು ಮೊದಲು ಶ್ರೀನಿವಾಸ ಪಂಡಿತರಾಗಿದ್ದರು. ಅವರು ಆ ಕಾಲದ ಭಾಗವತಾಗ್ರೇಸರ ರಾಗಿದ್ದ ಸಂತ ವಿಜಯದಾಸರನ್ನು ಅಲ್ಪರಾಗಿ ಕಂಡರು. ಅದರಿಂದ ಅವರಿಗೆ ರೋಗಬಾಧೆಯಾಯಿತು. ತಮ್ಮ ಹೀನಸ್ಥಿತಿಗೆ ಕಾರಣ ಅರಿತು ಸಂತರಲ್ಲಿ ಶರಣಾಗತರಾದರು. ವಿಜಯದಾಸರು ಅವರ ಮೊರೆ ಕೇಳಿ ಉಪಾಯಕ್ಕೆ ತಮ್ಮ ಶಿಷ್ಯ ಗೋಪಾಲದಾಸರ ಕಡೆಗೆ ಕಳಿಸಿದರು. ಗೋಪಾಲದಾಸರಿಂದ ದೀಕ್ಷೆ ಪಡೆದರು. ಅವರು ಕೊಟ್ಟ ಮಂತ್ರಿಸಿದ ರೊಟ್ಟಿಯನ್ನು ಸೇವಿಸಿ ತಮ್ಮ ರೋಗ ಕಳೆದುಕೊಂಡರು. ಗುರುವಿಗೆ ಶರಣಾದರು. ಗುರುವಿನ ಅಪ್ಪಣೆಯಂತೆ ಪಂಢರಪುರಕ್ಕೆ ಹೋಗಿ ಪಾಂಡುರಂಗನ ದರ್ಶನ ಪಡೆದರು. ಚಂದ್ರಭಾಗಾನದಿಯಲ್ಲಿ ಸ್ನಾನಮಾಡಿದಾಗ 'ಜಗನ್ನಾಥವಿಟ್ಠಲ' ಅಂಕಿತವುಳ್ಳ ಶಿಲೆಯನ್ನು ಪಡೆದರು. ಮುಂದೆ ಅದೇ ಅವರ ಅಂಕಿತವಾಯಿತು. (ಅವರಿಗೆ ಅಲ್ಪಾಯುಷ್ಯವಿತ್ತು. ಗುರು ಗೋಪಾಲದಾಸರು ಅವರಿಗೆ ತಮ್ಮ ೪೦ ವರ್ಷ ಆಯುಷ್ಯವನ್ನು ನೀಡಿದರು. ಅದರಿಂದಾಗಿ 'ಹರಿಕಥಾಮೃತಸಾರ'ದಂತಹ ಮಹತ್ಕೃತಿಯನ್ನು ರಚಿಸಲು ಜಗನ್ನಾಥದಾಸರಿಗೆ ಸಾಧ್ಯವಾಯಿತು.)

ಗೊಂದಾವಳಿ ಕ್ಷೇತ್ರದಲ್ಲಿ ವಾಸವಾಗಿದ್ದ ಶ್ರೀ ಬ್ರಹ್ಮಚೈತನ್ಯ ಮಹಾರಾಜರಿಗೆ ಒಂದು ದಿನ ಗೃಹೀಭಕ್ತರು ಕೇಳಿದರು, 'ನಾವು ಸಂಸಾರಿಗಳು. ನಮಗೆ ಹೆಂಡತಿ, ಮಕ್ಕಳು, ಹೊಲ ಮನೆ, ದನಕರು – ಮುಂತಾದ ಅನೇಕ ಉಪಾಧಿಗಳಿವೆ. ತಾವು ಹೇಳುವಂತೆ ಶ್ರೀರಾಮನಾಮಸ್ಮರಣೆಯನ್ನು ಸತತವಾಗಿ ಮಾಡುವುದಾಗಲಿ, ಶ್ರೀರಾಮನನ್ನು ಏಕಾಗ್ರತೆಯಿಂದ ಧ್ಯಾನಿಸುವುದಾಗಲಿ, ಕೊನೆಗೆ ಸ್ವಲ್ಪಕಾಲ ಒಂದೇಚಿತ್ತದಿಂದ ಜಪ ಮಾಡುವುದಾಗಲಿ ನಮಗೆ ಸಾಧ್ಯವಿಲ್ಲವಾಗಿದೆ.' ಎಂದು ಕೇಳುತ್ತ, "ನಮಗೆ ಪರಮಾರ್ಥ ಪ್ರಾಪ್ತಿಗೆ ದಾರಿ ಯಾವುದು?" ಎಂದು ಕೇಳಿದಾಗ ಬ್ರಹ್ಮಚೈತನ್ಯರು ಉತ್ತರಿಸಿದರು. "ನೀವು ಹೆಂಡತಿ ಮಕ್ಕಳನ್ನು ಕಂಡಾಗ, ಶ್ರೀರಾಮನು ಈ ಹೆಂಡತಿ ಮಕ್ಕಳನ್ನು ನನಗೆ ಪಾಲನೆ ಮಾಡುವುದಕ್ಕಾಗಿ ಕೊಟ್ಟಿದ್ದಾನೆ. ನಾನು ಅವರ ಬಗ್ಗೆ ಏನೇನು ಮಾಡಬೇಕಾದ ಕರ್ತವ್ಯವಿದೆಯೋ ಅದೆಲ್ಲವನ್ನೂ ಮಾಡಿ ಶ್ರೀರಾಮನಿಗೆ ಒಪ್ಪಿಸಬೇಕು ಎಂಬುದನ್ನು ಮನಸ್ಸಿಗೆ ತಂದುಕೊಳ್ಳಿ. ಇದರಿಂದ ನಿಮಗೆ ನಿಮ್ಮ ಸಂಸಾರದ ಯಾವುದೇ ವಸ್ತುವನ್ನು ನೋಡಿದಾಗ, 'ಇದು ಶ್ರೀರಾಮನದು. ನನಗೆ ಅವನು ಇದನ್ನು ನೋಡಿಕೊಳ್ಳಲು ಕೊಟ್ಟಿದ್ದಾನೆ. ನಾನು ನನ್ನ ಕರ್ತವ್ಯವನ್ನು ಆ ಬಗ್ಗೆ ಮಾಡಿ ಅವನಿಗೆ ಒಪ್ಪಿಸಬೇಕು' ಎಂಬ ಭಾವ ಹುಟ್ಟುವುದು. ಕೆಲವು ದಿನ ಪ್ರಯತ್ನಪೂರ್ವಕವಾಗಿ ಈ ಭಾವನೆಯನ್ನು ರೂಢಿಸಿಕೊಂಡರೆ ಕಾಲಾಂತರದಲ್ಲಿ ಅದು ರೂಢಿಯಾಗಿ, 'ನನ್ನದು' ಎಂಬ ಅಭಿಮಾನವು ಹೊರಟುಹೋಗುತ್ತದೆ. ಒಳಗೂ ಹೊರಗೂ ಶ್ರೀರಾಮ ಭಾವನೆ ವ್ಯಾಪಿಸಿಬಿಡುತ್ತದೆ. ಈ ಸಾಧನೆಯನ್ನು ಬಿಡದೆ ಆರು ತಿಂಗಳು ಮಾಡಿ ನೋಡಿರಿ. ಶ್ರೀರಾಮನ ಸಾಕ್ಷಾತ್ಕಾರವಾಗದಿದ್ದರೆ ಆಗ ನನ್ನಲ್ಲಿ ಬಂದು ಕೇಳಿರಿ" ಎಂದರಂತೆ.

ತೈಲಧಾರೆಯಂತೆ ಮನಸ್ಸು ಏಕಮುಖವಾಗಿ ದೇವರೆಡೆಗೆ ಹರಿಯುವುದೇ ಧ್ಯಾನ. ಜಪದಲ್ಲಿ ಏಕನಿಷ್ಠೆ, ಏಕಾಗ್ರತೆಗಳು ಏಕೀಭವಿಸಿದಾಗ ಅದು ಧ್ಯಾನದ ಮಟ್ಟಕ್ಕೇರುತ್ತದೆ. ಹೃದಯವು ಧ್ಯಾನಕ್ಕೆ ಪ್ರಶಸ್ತವಾದ ಸ್ಥಾನ ಎಂಬುದು ಧ್ಯಾನಸಿದ್ಧರ ಅಭಿಮತ. ಆದರೆ ಈ ಹೃದಯ ಯಾವುದು? ನಮಗೆ ತ್ರಿವಿಧ ಹೃದಯಗಳಿವೆ. ಶರೀರದಾದ್ಯಂತ ರಕ್ತವನ್ನು ಪಂಪಿಸುವ



ಕೆಲಸ ಮಾಡುತ್ತಿರುವ 'ಲಬ್, ಡಬ್' ಎನ್ನುವ ಹೃದಯ ಎಲ್ಲರಿಗೂ ಗೊತ್ತು. ಎರಡನೆಯ ಹೃದಯದ ಬಗ್ಗೆ ಮಾತಾಡುತ್ತೇವೆ. 'ಆತನ ಹೃದಯ ಶುದ್ಧವಾಗಿದೆ.' 'ಅವನ ಮಾತು ಹೃದಯಾಂತರಾಳದಿಂದ ಬರುತ್ತದೆ, ಬುದ್ಧಿಯ ಕಸರತ್ತಿನಿಂದ ಅಲ್ಲ.' ಪ್ರೀತಿ, ಭಕ್ತಿ, ನಿಃಸ್ವಾರ್ಥತೆ, ಸೇವಾಮನೋಭಾವ, ನಿರಹಂಕಾರ ಇವೆಲ್ಲ ಈ ಹೃದಯದ ಲಕ್ಷಣಗಳು. ಮೂರನೆಯ ಹೃದಯವೇ ಆಧ್ಯಾತ್ಮಿಕ ಹೃದಯ. ಇದನ್ನು ಅನಾಹತ ಚಕ್ರ ಎಂದೂ ಕರೆಯುತ್ತಾರೆ. (ಸ್ಥೂಲ, ಸೂಕ್ಷ್ಮ, ಕಾರಣ – ಈ ಮೂರು ಶರೀರಗಳ ಸಂಧಿಸ್ಥಾನವನ್ನು ತಂತ್ರಶಾಸ್ತ್ರದಲ್ಲಿ ಚಕ್ರ ಎಂದು ಕರೆಯುತ್ತಾರೆ.) ಹೃದಯದಲ್ಲಿ ಧ್ಯಾನ ಮಾಡಿ ಎಂದಾಗ ಈ ಆಧ್ಯಾತ್ಮಿಕ ಹೃದಯದಲ್ಲಿ ಮನಸ್ಸನ್ನು ನಿಲ್ಲಿಸಿ ಎಂದರ್ಥ. ನಮ್ಮಲ್ಲಿ ಹೆಚ್ಚಿನವರ ಮಾನಸಿಕ ಶಕ್ತಿಯೆಲ್ಲ ದೈಹಿಕ, ಜೈವಿಕ ಬಯಕೆಗಳ ತೃಪ್ತಿಗಾಗಿ ಮತ್ತು 'ಅಹಂ'ನ ರಕ್ಷಣೆಗಾಗಿಯೇ ವ್ಯಯವಾಗುತ್ತದೆ. ರಮಣ ಮಹರ್ಷಿಗಳು ಅನ್ನುವಂತೆ 'ನಾನು'ವಿನ ಮೂಲವನ್ನು ಶೋಧಿಸುತ್ತಾ ಹೋದರೆ ಈ ಚಕ್ರವನ್ನು ಅಥವಾ ಆಧ್ಯಾತ್ಮಿಕ ಹೃದಯವನ್ನು ತಲುಪಬಹುದು.

ಪ್ರಾರ್ಥನೆಯು ಧ್ಯಾನಕ್ಕೆ ಪ್ರೇರಕವೂ ಹೌದು, ಪೋಷಕವೂ ಹೌದು. ಪ್ರಾರ್ಥನೆಯ ಅಭ್ಯಾಸದಿಂದ ಧ್ಯಾನ ಶಕ್ತಿಶಾಲಿಯಾಗುತ್ತದೆ. ಧ್ಯಾನಕ್ಕೆ ಕುಳಿತುಕೊಳ್ಳುವದಕ್ಕೆ ಮೊದಲು ಹತ್ತು, ಹದಿನೈದು ನಿಮಿಷಗಳ ಕಾಲ ಒಂದೇ ಮನಸ್ಸಿನಿಂದ ಪ್ರಾರ್ಥಿಸಬೇಕು. ಕಾರ್ಮೋಡಗಳು ದಟ್ಟೈಸಿದಾಗ ಹನಿಯೊಡೆದು ಮಳೆ ಸುರಿಯುವಂತೆ, ಪ್ರಾರ್ಥನೆ ತೀವ್ರವಾದಾಗ ಮನಸ್ಸು ಮೇಲೇರಿ ಭಾವನಾತ್ಮಕ ಹೃದಯವನ್ನು ದಾಟಿ, ಆಧ್ಯಾತ್ಮಿಕ ಹೃದಯವನ್ನು ತಲುಪುವಾಗ ಕಣ್ತುಂಬಿ ಬಂದು ಕಂಬನಿ ಹರಿಯತೊಡಗುತ್ತದೆ. ಅದೇ ವ್ಯಾಕುಲತೆಯ ಉಗಮ. ಅದರಿಂದಲೇ ಧ್ಯಾನದ ಸಿದ್ಧಿ.

ಪರಿವರ್ತನೆಯ ಪ್ರವರ್ತಕವಾಗಬಲ್ಲ ಅಂತಃಶಕ್ತಿಯ ಅಕ್ಷಯ ಆಗರವೇ ಪ್ರಾರ್ಥನೆಯಲ್ಲಿದೆ. ಗುಂಡಿ ಒತ್ತಿದೊಡನೆ ಚಿಮ್ಮುವ ಚಿಲುಮೆಯಂತೆ, ಪ್ರಾರ್ಥನೆಯ ಪರಿಪಾಠದಿಂದ ಆ ಶಕ್ತಿಯ ಮೂಲ ಕರಗತವಾಗುತ್ತದೆ ಎಂದು ನೋಬೆಲ್ ಪ್ರಶಸ್ತಿ ವಿಜೇತ ವಿಜ್ಞಾನಿ, ವೈದ್ಯ ಅಲೆಕ್ಸಿಸ್ ಕೆರೆಲ್ ಹೇಳುತ್ತಾನೆ:

"ಅತಿಹೆಚ್ಚು ಪ್ರಭಾವಶಾಲಿಯಾದ ಶಕ್ತಿಯನ್ನು ಪ್ರಾರ್ಥನೆಯಿಂದ ವ್ಯಕ್ತಿಯೊಬ್ಬ ಸೃಜಿಸಬಲ್ಲ. ಗುರುತ್ವಾಕರ್ಷಣ ಶಕ್ತಿ ಎಷ್ಟು ಸತ್ಯವೋ, ಪ್ರಾರ್ಥನೆಯಿಂದ ಬಲಸಂವರ್ಧನೆ ಸಾಧ್ಯ ಎಂಬುದೂ ಅಷ್ಟೇ ಸತ್ಯ. ಇತರ ಎಲ್ಲ ತೆರನಾದ ಚಿಕಿತ್ಸಾ ವಿಧಾನಗಳು ಫಲಪ್ರದವಾಗದಿದ್ದಾಗ ಕೇವಲ ಶ್ರದ್ಧಾನ್ವಿತ ಹೃತ್ಪೂರ್ವಕ ಪ್ರಾರ್ಥನೆಯಿಂದ ರೋಗಕ್ಲೇಶಗಳಿಂದ ಮುಕ್ತರಾದ ವ್ಯಕ್ತಿಗಳನ್ನು ವೈದ್ಯನಾದ ನಾನು ಕಂಡುಕೊಂಡಿದ್ದೇನೆ. ಈ ಪ್ರಾರ್ಥನಾವಿಧಾನ ರೇಡಿಯಂನಂತೆ ಅದ್ಭುತಶಕ್ತಿ ವಿಕಿರಣಶೀಲವುಳ್ಳದ್ದು. ತಾನೇತಾನಾಗಿ ಶಕ್ತಿಯನ್ನು ಜಾಗ್ರತಗೊಳಿಸಿ ವೃದ್ಧಿಸುವಂಥದ್ದು. ನಾವು ಪ್ರಾರ್ಥಿಸುವಾಗಲೆಲ್ಲ ಈ ವಿಶ್ವ ಬ್ರಹ್ಮಾಂಡವನ್ನು ನಡೆಯಿಸುವ, ಎಂದೆಂದಿಗೂ ಬತ್ತಿ ಬರಿದಾಗದ ದಿವ್ಯಶಕ್ತಿಯ ಸಂಪರ್ಕ ಲಭ್ಯವಾಗುತ್ತದೆ. ನಮ್ಮ ಕಳಕಳಿಯ ಬೇಡಿಕೆಯು ಎಷ್ಟೋ ವಿಧದ ನಮ್ಮ ದೌರ್ಬಲ್ಯಗಳನ್ನು ದೂರ ಮಾಡುತ್ತದೆ; ತನ್ಮೂಲಕ ನಾವು ಬಲಿಷ್ಠರಾಗಿ ತಲೆ ಎತ್ತುತ್ತೇವೆ. ಭಗವಂತನನ್ನು ಹೃತ್ಪೂರ್ವಕವಾಗಿ ಪ್ರಾರ್ಥಿಸಿದಾಗಲೆಲ್ಲ ನಿಮ್ಮ ತನುಮನಗಳಲ್ಲಿ ಶುಭ ಪರಿಣಾಮ ಆಗಿಯೇ ತೀರುತ್ತದೆ."

ವ್ಯಾವಹಾರಿಕ ಜಗತ್ತಿನಲ್ಲಿ ಬಗ್ಗಿದವನಿಗೆ ಗುದ್ದು ಜಾಸ್ತಿಯಾದರೆ, ಆಧ್ಯಾತ್ಮಿಕ ಜಗತ್ತಿನಲ್ಲಿ ಬಗ್ಗಿದವನಿಗೆ ಮುದ್ದು ಜಾಸ್ತಿ, ಅಂದರೆ ದೇವರ ವಿಶೇಷ ಕೃಪೆ ಲಭ್ಯ. 'ನಾನು'ವಿನ ನಾಶಕ್ಕೆ ಪ್ರಾರ್ಥನೆಯೇ ಪ್ರಬಲವಾದ ಅಸ್ತ್ರ. 'ನನ್ನನಳಿಸು, ನಿನ್ನ ಮೆರೆಸು! ಬಂದು ನೆಲೆಸು, ಹೃದಯಪದ್ಮದಲದಲಿ!' ಎಂಬುದೇ ಸಾಧಕನ ತಾರಕಮಂತ್ರ, ಅದೇ ಪ್ರಾರ್ಥನೆಯ ಪರಾಕಾಷ್ಠೆ.

**ಪರಿಶಿಷ್ಟ**

ಧರ್ಮಗಳು ಮನುಷ್ಯರನ್ನು ದ್ವೇಷ, ಹಿಂಸೆಯ ನರಕಕ್ಕೆ ತಳ್ಳಲು ಹುಟ್ಟಿಕೊಂಡಿವೆಯೆ? ದುರ್ಬಲರನ್ನು ಶೋಷಿಸಲು ಹುಟ್ಟಿಕೊಂಡಿವೆಯೆ? ಮತಾಂಧತೆಯಿಂದ ಅವು ಮಾನವನನ್ನು ಉನ್ಮತ್ತನನ್ನಾಗಿಸುವ ಮಾದಕ ದ್ರವ್ಯಗಳೆ?

ವಿಶ್ವದ ಮೂಲಭೂತ ಏಕತೆಯ ಕುರಿತ ಸಿದ್ಧಾಂತ ಕೇವಲ ಅನುಭಾವಿಗಳ ದೃಢವಾದ ಅನುಭೂತಿ ಮಾತ್ರವಲ್ಲ, ಅದು ಆಧುನಿಕ ಯುಗದ ಭೌತಶಾಸ್ತ್ರದ ಅಧ್ಯಯನದಿಂದ ತಿಳಿದುಬರುವ ಪ್ರಮುಖವಾದ ಸಂಗತಿಯೂ ಹೌದು. ಪೌರಸ್ತ್ಯ ತಾತ್ತ್ವಿಕ ಪರಂಪರೆಯು ಭೇದರಹಿತ ಏಕಮೇವಾದ್ವಿತೀಯ ಪರಮಸತ್ಯದ ನೈಜಸ್ವರೂಪವನ್ನು ತಿಳಿಸುತ್ತ ಅದು ಸರ್ವವ್ಯಾಪಿಯಾಗಿದೆ ಎಂದು ಹೇಳುತ್ತದೆ. ಹಿಂದೂಧರ್ಮದಲ್ಲಿ ಅದನ್ನು 'ಬ್ರಹ್ಮ' ಎಂದೂ ಬೌದ್ಧಧರ್ಮದಲ್ಲಿ 'ಧರ್ಮಕಾಯ' ವೆಂದೂ, ಚೀನಾ ದೇಶದ ತಾವೋ ಮತದಲ್ಲಿ 'ಯಾವೋ' ಎಂದೂ ಪರಿಗಣಿಸುತ್ತಾರೆ. *(ಫ್ರಿಜೊ ಕಾಪ್ರಾ)*

೧೮೯೩ರಲ್ಲಿ ಅಮೇರಿಕೆಯಲ್ಲಿ ನಡೆದ ಚಿಕಾಗೋ ಸರ್ವಧರ್ಮ ಸಮ್ಮೇಳನದಲ್ಲಿ ಸ್ವಾಮಿ ವಿವೇಕಾನಂದರು ಹೇಳಿದ ಮಾತುಗಳು:

"ಜಗತ್ತಿಗೆ ವಿಶ್ವಧರ್ಮ ಸಮ್ಮೇಳನವು ಏನಾದರೂ ತೋರಿದ್ದರೆ ಅದು ಇದನ್ನು: ದೈವೀಪ್ರಜ್ಞೆ, ಪವಿತ್ರತೆ, ದಯೆ, ದಾನಬುದ್ಧಿ– ಮುಂತಾದವುಗಳು ಜಗತ್ತಿನ ಯಾವ ಒಂದು ಧರ್ಮಸಂಸ್ಥೆಗೋ ಧರ್ಮಕ್ಕೋ ಮೀಸಲಾದುದಲ್ಲ.

ಪ್ರತಿಯೊಂದು ಧರ್ಮ ಕೂಡ, ಉನ್ನತ ಮಟ್ಟದ ಉದಾತ್ತ ಚರಿತರಾದ ಸ್ತ್ರೀಪುರುಷರನ್ನು ಕೊಟ್ಟಿರುವುದು. ಇಷ್ಟೊಂದು ಸಾಕ್ಷ್ಯಾಧಾರಗಳು ಇರುವಾಗಲೂ ಯಾರಾದರೂ ತಮ್ಮ ಧರ್ಮ ಒಂದೇ ಬಾಳುವುದು, ಇತರ ಧರ್ಮಗಳೆಲ್ಲವೂ ನಾಶವಾಗುವವು ಎಂದು ತಿಳಿದುಕೊಂಡರೆ ಅವರ ಅಜ್ಞಾನ, ಮತಾಂಧತೆ, ಮತಿಹೀನತೆಗಳನ್ನು ಕಂಡು ನಾನು ತೀವ್ರವಾಗಿ ಮರುಗುತ್ತೇನೆ, ಕನಿಕರಪಡುತ್ತೇನೆ. ಪ್ರತಿಯೊಂದು ಧರ್ಮದ ಧ್ವಜದ ಮೇಲೂ ವಿಭಿನ್ನ ಧರ್ಮಾನುಯಾಯಿಗಳು ಎಷ್ಟೇ ವಿರೋಧಿಸಿದರೂ 'ಹೋರಾಟವಲ್ಲ, ಸಹಾಯ', 'ನಾಶವಲ್ಲ, ಸ್ವೀಕಾರ', 'ವೈಮನಸ್ಯವಲ್ಲ, ಶಾಂತಿ ಮತ್ತು ಸಮನ್ವಯ' ಎಂಬುದನ್ನು ಬೇಗ ಬರೆಯಲಾಗುವುದು."

ವಿಜ್ಞಾನದ ಪರಮಾದ್ಭುತವಾದ ನೂತನ ಸಂಶೋಧನೆಗಳ ಬೆಳಕಿನಲ್ಲಿ ಇಡಿಯ ಜಗತ್ತೇ ಒಂದು ಎಂಬುದು ಸ್ಪಷ್ಟವಾಗಿರುವ ಸನ್ನಿವೇಶದಲ್ಲಿ ಜಗತ್ತಿನ ನಿಯಾಮಕನೂ ಒಬ್ಬನೇ. ಎಲ್ಲರೂ ದೇವರ ಮಕ್ಕಳೇ ಎಂಬ ಶ್ರೇಷ್ಠ ಸತ್ಯವನ್ನು ಎಲ್ಲ ಧಾರ್ಮಿಕ ಮುಖಂಡರೂ ಪ್ರಸಾರ ಮಾಡುವ ಕಾಲ ಸನ್ನಿಹಿತವಾಗಿದೆ.

❋ 'ಯಾರ ಮಹಿಮೆಯನ್ನು ಹಿಮವತ್ ಪರ್ವತಗಳೂ ಅಗಾಧ ಸಾಗರಗಳೂ ನದಿಗಳೂ ದಶದಿಕ್ಕುಗಳೂ ಸಾರುತ್ತವೆಯೋ ಆತನನ್ನು ನಮ್ಮ ಪರಿಶುದ್ಧ ನಿವೇದನೆಗಳಿಂದ ಪೂಜಿಸೋಣ.' *(ಋಗ್ವೇದ ೧೦-೧೨೧-೪)*

❋ 'ಸಪ್ತ ಸಮುದ್ರಗಳೂ ಭೂಮಿಯೂ ಅಲ್ಲಿದ್ದುಕೊಂಡಿರುವ ಎಲ್ಲವೂ ಅವನನ್ನು ಹೊಗಳಿ ಹಾಡುತ್ತವೆ. ಅವನನ್ನು ಹಾಡಿ ಹೊಗಳದ ಯಾವ ವಸ್ತುವೂ ಇಲ್ಲ. ಆದರೆ ಅವು ಮಾಡುವ ಸ್ತುತಿಯನ್ನು ನೀವು ತಿಳಿದುಕೊಂಡಿಲ್ಲ.' *(ಅಲ್ ಕೊರಾನ್, ೧೭.೪೪)*

❋ 'ಭಗವಂತನು ಚೈತನ್ಯಮಯನು, ಅವನು ಎಲ್ಲ ವಸ್ತುಗಳಲ್ಲಿಯೂ ವ್ಯಕ್ತನಾಗಿದ್ದಾನೆ - ಜೀವಾತ್ಮನು ಶರೀರದಲ್ಲಿ ವ್ಯಕ್ತವಾಗುವಂತೆ.' *(ಕ್ರೈಸ್ತರ ಪ್ರಸಿದ್ಧ ಪವಿತ್ರ ಗ್ರಂಥ, **ಫಿಲೋಕಾಲಿಯಾ** ಸಂ.೧.೪೪೭)*

❋ 'ಭಗವಂತನೇ ಸಮಸ್ತ ಜಗತ್ತಿನ ಉತ್ಪತ್ತಿಗೆ ಕಾರಣ. ಆತನಿಂದಲೇ ಜಗತ್ತು ನಡೆಯುತ್ತದೆ. *(ಭಗವದ್ಗೀತೆ-೧೦.೮)*

❋ 'ಕಣ್ಣು ತೆರೆದಿದ್ದರೂ ಸರ್ವಭೂತಗಳಲ್ಲಿಯೂ ಭಗವಂತನಿರುವುದನ್ನು ನೋಡಿದ್ದೇನೆ. ಮನುಷ್ಯರಲ್ಲಿ, ಪ್ರಾಣಿಗಳಲ್ಲಿ, ಗಿಡಮರಗಳಲ್ಲಿ, ಸೂರ್ಯಚಂದ್ರರಲ್ಲಿ, ನೆಲದಲ್ಲಿ, ಜಲದಲ್ಲಿ, ಸರ್ವಭೂತಗಳಲ್ಲಿಯೂ ಆತನೇ ಇದ್ದಾನೆ.' *-ಭಗವಾನ್ ಶ್ರೀರಾಮಕೃಷ್ಣ.*

ನಿಜವಾದ ಪ್ರೀತಿ ವ್ಯಕ್ತವಾಗುವ ಬಗೆ ಹೇಗೆ? ತ್ಯಾಗ ಸೇವೆಗಳ ಮೂಲಕ ಅಲ್ಲವೆ? ಪ್ರೀತಿಪಾತ್ರರ ಮೆಚ್ಚುಗೆಗಾಗಿ ಅವರ ಸಂತೋಷಕ್ಕಾಗಿ ಎಂಥ ತ್ಯಾಗಕ್ಕೂ ಸೇವೆಗೂ ನಾವು ಸಿದ್ಧರೆಂದಾದರೆ ನಮ್ಮಲ್ಲಿ ನಿಜವಾದ ಪ್ರೀತಿ ಉಕ್ಕುತ್ತಿದೆ ಎಂದಾಯಿತಲ್ಲವೆ? ಇಂದು ಧಾರ್ಮಿಕರೆನಿಸಿಕೊಂಡವರು ಎಲ್ಲರೆಡೆಗೂ ಆ ಪ್ರೀತಿಯನ್ನು ಹರಿಯಿಸಲು ಸಮರ್ಥರಾಗಿದ್ದಾರೆಯೇ?

ಪರಸ್ಪರ ದ್ವೇಷಿಸಲು ನಮ್ಮಲ್ಲಿ ಬೇಕಷ್ಟು ಧರ್ಮಗಳಿವೆ, ಆದರೆ ಪ್ರೀತಿಸಲು ಇಲ್ಲ.

'ಗಾಡ್', 'ಅಲ್ಲಾ', 'ಬ್ರಹ್ಮ' ಎಂಬೆಲ್ಲ ಹೆಸರುಗಳು ಬೇರೆ ಬೇರೆಯಾದರೂ ಸರ್ವಶಕ್ತನಾದ ಭಗವಂತನು ಒಬ್ಬನೇ. ಎಲ್ಲರೂ ಆತನ ಮಕ್ಕಳೇ. ಕೆಲವರು ಸ್ವಲ್ಪ ಮುಂದಿದ್ದಾರೆ. ಇನ್ನು ಕೆಲವರು ಸ್ವಲ್ಪ ಹಿಂದಿದ್ದಾರೆ. ನಾವೆಲ್ಲರೂ ಪ್ರೀತಿ ವಿಶ್ವಾಸದಿಂದ ಬದುಕಲು ಕಲಿಯಬೇಕೆಂಬುದೇ ಆತನ ಇಚ್ಛೆ. ಪ್ರೇಮಮಯನಾದ ಭಗವಂತನ ಪ್ರತಿನಿಧಿಗಳಾದ ಬೆಳಕು ಗಾಳಿಗಳು ಎಲ್ಲರ ಮನೆಯಂಗಳಕ್ಕೂ ಹರಡುತ್ತವೆ. ಎಲ್ಲೆಡೆಗೂ ಹಬ್ಬಿ ಎಲ್ಲರನ್ನೂ ತಬ್ಬಿ ಅವು ನಿಸ್ವಾರ್ಥಪ್ರೀತಿಯ ಪಾಠವನ್ನೇ ಬೋಧಿಸುತ್ತವೆ. ವಿವಿಧ ಆಕಾರಗಳಿಂದ ಗೋಚರಿಸಿದರೂ ಆತ ಒಬ್ಬನೇ. ಎಲ್ಲರೂ ಬೇರೆ ಬೇರೆ ಪಥಗಳಿಂದ ಅವನನ್ನು ಸಮೀಪಿಸುತ್ತಿದ್ದಾರೆ ಎಂಬ ಸತ್ಯ ಎಲ್ಲರಿಗೂ ಮನವರಿಕೆಯಾಗಬೇಕಾಗಿದೆ. ಅಸಂಖ್ಯ ದೇವದೇವಿಯರಾಗಿ ಕಂಡರೂ ಆತನೊಬ್ಬನೇ.

ಯಾವ ಮತ, ಪಂಥದವರೇ ಆಗಲಿ, ದೇವರಲ್ಲಿ ವಿಶ್ವಾಸವಿರುವವರೆಲ್ಲ ಶಾಂತಿ ಸೌಹಾರ್ದ ಸಮನ್ವಯ ಸದ್ಭಾವನೆಗಳು ಸರ್ವತ್ರ ವೃದ್ಧಿಯಾಗುವಂತೆ ಭಗವಂತನಲ್ಲಿ ಪ್ರಾರ್ಥಿಸಬೇಕು. 

**ಈಶ್ವರ ಅಲ್ಲಾ ತೇರೇ ನಾಮ್,**
**ಸಬಕೋ ಸನ್ಮತಿ ದೇ ಭಗವಾನ್.**

*(ಸಮಾಪ್ತಿ)*

### ನಾಮಜಪದ ಶಕ್ತಿ

**ಪ್ರೀತಿಯಿಂದ ಮತ್ತೆ ಮತ್ತೆ ಹೆಸರು ಹೇಳುವುದೆ ಜಪ. ಹಾಗೆ ಮಾಡುತ್ತಾ ಹೋಗು. ಮಾಡುತ್ತಾ ಮಾಡುತ್ತಾ ಶಾಂತಿ ಆನಂದ ಅನುಭವಿಸುತ್ತೀಯೆ. ಜಪಕ್ಕೆ ಅಂಥಾ ವಿಶೇಷವಾದ ನಿಯಮ ಏನೂ ಇಲ್ಲ; ಸರ್ವಕಾಲಗಳಲ್ಲಿ, ಸರ್ವಸನ್ನಿವೇಶಗಳಲ್ಲಿ, ನಡೆಯುತ್ತಿರು, ಉಣ್ಣುತ್ತಿರು, ಮಲಗಿರು, ಎಚ್ಚೆತ್ತಿರು, ನಿದ್ರೆಯಲ್ಲಿ, ಸ್ವಪ್ನದಲ್ಲಿ, ಎಲ್ಲಿ ಅಂದರೆ ಅಲ್ಲಿ ಯಾವಾಗೆಂದರೆ ಆವಾಗ ಸರ್ವಾವಸ್ಥೆಗಳಲ್ಲಿಯೂ ಜಪಮಾಡಬಹುದು. ಅಸಲು ಮುಖ್ಯವಾಗಿ ಇರಬೇಕಾದ್ದೆಂದರೆ ಪ್ರೇಮ. ಎಷ್ಟು ಪ್ರೇಮಭರದಿಂದ ಆತನ ನಾಮಜಪ ಮಾಡುತ್ತೇಯೋ ಅಷ್ಟೂ ಹೆಚ್ಚಿನ ಆನಂದ ದೊರೆಯುತ್ತದೆ.**

**ಭಗವಂತನ ನಾಮಭಜನೆ ಮಾಡುತ್ತಾ ಸಂಯಮ ತನ್ನಷ್ಟಕ್ಕೆ ತಾನೆ ಉಂಟಾಗುತ್ತದೆ. ದೇವರ ಹೆಸರಿನಲ್ಲಿ ಎಂತಹ ಶಕ್ತಿ ಇದೆ ಎಂದರೆ ಅಂತರಿಂದ್ರಿಯ ಬಹಿರಿಂದ್ರಿಯ ಎಲ್ಲ ಸಂಯಮವಾಗಿ ಬಿಡುತ್ತದೆ.**

**-ಸ್ವಾಮಿ ಶಿವಾನಂದ**

*('ಗುರುವಿನೊಡನೆ ದೇವರಡಿಗೆ' ಗ್ರಂಥದಿಂದ, ಭಾಗ ೨)*




## ಏಕಾದಶ ಸ್ಕಂಧ

# ಲೀಲಾ ಸಮಾಪ್ತಿ

**ನಾರದರಿಂದ ವಸುದೇವನಿಗೆ ಉಪದೇಶ:** ಶ್ರೀಕೃಷ್ಣನ ದರ್ಶನಕ್ಕೆ ನಾರದರು ಆಗಾಗ ದ್ವಾರಕೆಗೆ ಬರುತ್ತಲೇ ಇದ್ದರು. ಒಮ್ಮೆ ವಸುದೇವನ ಮನೆಗೂ ಬಂದರು. ವಸುದೇವನು ನಾರದರನ್ನು ಆದರಿಸಿ ಸತ್ಕರಿಸಿ, ಸಂಸಾರದಿಂದ ವಿಮೋಚನೆ ಪಡೆಯುವ ಬಗೆಯನ್ನು ತಿಳಿಸಲು ಅವರನ್ನು ವಿನಂತಿಸಿಕೊಂಡನು. ವಸುದೇವನು ಸ್ವತಃ ಭಗವಂತನನ್ನೇ ಮಗನಾಗಿ ಪಡೆದಿದ್ದರೂ, ಅವನ ಪ್ರಶ್ನೆಯು ನಾರದರಿಗೆ ಅಚ್ಚರಿ ತಂದಿತು. ಭರತನ ಒಂಬತ್ತು ಮಂದಿ ತಮ್ಮಂದಿರು ಭಾಗವತ ಮತ್ತು ಪರಮಾರ್ಥ ತತ್ತ್ವಗಳನ್ನು ಲೋಕಕಲ್ಯಾಣಾರ್ಥವಾಗಿ ಉಪದೇಶಿಸುವುದರಲ್ಲಿ ನಿರತರಾದರು. ಕವಿ, ಹರಿ, ಅಂತರಿಕ್ಷ, ಪ್ರಬುದ್ಧ, ಪಿಪ್ಪಲಾಯನ, ಆವಿಹೋತ್ರ, ದ್ರಮಿಳ, ಚಮಸ, ಕರಭಾಜನ ಎಂಬ ಆ ಒಂಬತ್ತು ಮುನಿಗಳು ಬೋಧಿಸಿದ ತತ್ತ್ವಗಳನ್ನು ಅವರು ಹೇಳಿದರು. ಭಾಗವತಧರ್ಮ, ಭಾಗವತರು, ಭಗವಂತನ ಮಹಿಮೆ, ಭಗವಂತನ ಮಾಯೆ ಮತ್ತು ಭಗವಂತನ ಸ್ವರೂಪ ಇವುಗಳ ತಿಳುವಳಿಕೆಯೇ ಭಾಗವತ ಧರ್ಮದ ಸೂಕ್ಷ್ಮಗಳಾಗಿವೆ ಎಂದು ನಾರದರು ಬೋಧಿಸಿದರು.

**ಶ್ರೀಕೃಷ್ಣಾವತಾರದ ಕೊನೆಯ ದಿನಗಳು:** ಹಿರಿಯ ಋಷಿಮುನಿಗಳು ಹತ್ತಿರದಲ್ಲಿದ್ದ ಪ್ರಭಾಸ ಎಂಬ ಪುಣ್ಯಕ್ಷೇತ್ರಕ್ಕೆ ಪ್ರವಾಸ ಬಂದರು. ಯಾದವರ ಹುಡುಗರು ಅಲ್ಲೇ ಆಟವಾಡುತ್ತಿದ್ದರು. ಅವರಿದ್ದಲ್ಲಿಗೆ ಬಂದ ಹುಡುಗರು ಆ ಋಷಿಗಳನ್ನು ಕೆಣಕಬೇಕೆಂದು ಯೋಚಿಸಿದರು. ಜಾಂಬವತಿಯ ಮಗನಾದ ಸಾಂಬನು ಸುಂದರನಾಗಿದ್ದರಿಂದ ಅವನಿಗೆ ಸ್ತ್ರೀ ವೇಷ ಹಾಕಿ, ಗರ್ಭಿಣಿಯಂತೆ ಅಲಂಕರಿಸಿದರು. ಅವನನ್ನು ಕರೆದುಕೊಂಡು ಬಂದು ಋಷಿಗಳ ಮುಂದೆ ನಿಲ್ಲಿಸಿದರು. ಅವರೆಲ್ಲರೂ ಋಷಿಗಳಿಗೆ ನಮಸ್ಕರಿಸಿ, ‘ಈಕೆಗೆ ಹುಟ್ಟುವ ಮಗು ಗಂಡುಮಗುವೇ, ಅಥವಾ ಹೆಣ್ಣುಮಗುವೇ ತಿಳಿಸಿ’ ಎಂದರು. ಋಷಿಗಳಿಗೆ ಇವರು ಕಪಟ ನಾಟಕವಾಡುತ್ತಿದ್ದರೆಂದು ತಿಳಿಯಿತು. ಅವರು ಸಿಟ್ಟಿಗೆದ್ದು, ‘ಎಲೈ ಅವಿವೇಕಿಗಳೇ, ಇವಳಲ್ಲಿ ಗಂಡು ಹುಟ್ಟುವುದಿಲ್ಲ; ಹೆಣ್ಣೂ ಹುಟ್ಟುವುದಿಲ್ಲ. ಒನಕೆಯೊಂದು ಹುಟ್ಟುವುದು. ಆ ಒನಕೆಯಿಂದಲೇ ನಿಮ್ಮ ಕುಲದ ನಾಶವಾಗುತ್ತದೆ’ ಎಂದರು. ಬಾಲಕರು ಗಾಬರಿಯಾಗಿ ಮನೆಗೆ ಹಿಂತಿರುಗಿದರು. ನಡೆದ ವಿಷಯವನ್ನು ತಿಳಿಸಿ, ಸಾಂಬನ ವೇಷ ಕಳಚಿದಾಗ ಆತನ ಹೊಟ್ಟೆಯಿಂದ ಉಕ್ಕಿನ ಒನಕೆಯೊಂದು ಹೊರಬಂದಿತ್ತು. ಹಿರಿಯರೆಲ್ಲ ಸಭೆ ಸೇರಿ, ಆ ಒನಕೆಯನ್ನು ಕುಟ್ಟಿ ಪುಡಿಮಾಡಿ ಸಮುದ್ರಕ್ಕೆ ಚೆಲ್ಲಿದರು. ಆ ಒನಕೆಯ ಚೂರೊಂದನ್ನು ಸಮುದ್ರದ ಒಂದು ಮೀನು ನುಂಗಿತು. ಅದೇ ಮೀನು ಮೀನುಗಾರನ ಬಲೆಗೆ ಸಿಲುಕಿತು. ಆ ಮೀನನ್ನು ಕೊಯ್ಯುವಾಗ ಅದರಲ್ಲಿದ್ದ ಒನಕೆಯ ಚೂರು ಮೀನುಗಾರನಿಗೆ ಸಿಕ್ಕಿತು. ಅವನು ಅದನ್ನು ತನ್ನ ಬಾಣಕ್ಕೆ ಚುಚ್ಚಿದನು. ಉಕ್ಕಿನ ಪುಡಿಯನ್ನು ಸಮುದ್ರವು ಹೊರಕ್ಕೆ ಹಾಕಿತು. ಆ ಪುಡಿಯೆಲ್ಲವೂ ತ್ರಿಶೂಲದಂತೆ ಚೂಪಾದ ಹುಲ್ಲುಗಾವಲಾಗಿ ಪರಿವರ್ತಿತವಾಯಿತು.

ಪ್ರಕೃತಿ ಮತ್ತು ಪರಿಸರವನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದ ಶ್ರೀಕೃಷ್ಣನು ಮುಂದಾಗಬಹುದಾದ ಅನಾಹುತವನ್ನು ಗ್ರಹಿಸಿದನು. ಅದಕ್ಕೆ ತಕ್ಕಂತೆ ಯಾದವರ ನಡವಳಿಕೆ, ಜೀವನದ ರೀತಿನೀತಿಗಳಲ್ಲಿನ ವ್ಯತ್ಯಾಸವನ್ನೂ ಅವನು ಗಮನಿಸಿದನು. ಯಾದವರು ಶ್ರೀಕೃಷ್ಣನ ಬೆಂಬಲ ಇದೆಯೆಂದು ಕೊಬ್ಬಿನಿಂದ ಮೆರೆಯುತ್ತಿದ್ದರು. ದರ್ಪ ಮತ್ತು ದುರಹಂಕಾರಗಳೇ ಅವರಿಗೆ ಭೂಷಣವೆನಿಸಿತು. ದ್ವಾರಕೆಯಲ್ಲಿ ಅಪಶಕುನವಾಗತೊಡಗಿತು.



ಇನ್ನು ಏಳು ದಿನಗಳಲ್ಲಿ ಸಮುದ್ರವು ಉಕ್ಕೇರಿ ದ್ವಾರಕೆಯು ಮುಳುಗುವುದೆಂದು ಶ್ರೀಕೃಷ್ಣನಿಗೆ ಖಚಿತವಾಯಿತು. ತಕ್ಷಣವೇ ಹಿರಿಯರನ್ನೆಲ್ಲ ಕರೆಸಿದ ಶ್ರೀಕೃಷ್ಣ, ತಾನು ಗ್ರಹಿಸಿದ ವಿಷಯವನ್ನು ಹೇಳಿದನು. "ನಾವೆಲ್ಲರೂ ಇಲ್ಲಿಂದ ಪುಣ್ಯಕ್ಷೇತ್ರವಾದ ಪ್ರಭಾಸಕ್ಕೆ ತೆರಳೋಣ. ಅಲ್ಲಿ ಧರ್ಮದಿಂದ ನಡೆಯುತ್ತಾ ಜೀವನ ಸಾಗಿಸೋಣ" ಎಂದನು. ಎಲ್ಲರೂ ಕೃಷ್ಣನ ಮಾತಿಗೆ ಸಹಮತ ವ್ಯಕ್ತಪಡಿಸಿದರು.

ಕೃಷ್ಣನು ಮನಸ್ಸಿನ ನೆಮ್ಮದಿಗಾಗಿ ಏಕಾಂತಸ್ಥಳಕ್ಕೆ ಬಂದನು. ಆತನೊಂದಿಗೆ ಉದ್ಧವನೂ ಬಂದನು. ಅವನು ದುಗುಡ ಮನಸ್ಸಿನಿಂದಿದ್ದನು. "ಕೃಷ್ಣ, ಇನ್ನು ಕೆಲವೇ ದಿನಗಳಲ್ಲಿ ಯಾದವರ ನಾಶವಾಗುವುದು. ನನ್ನನ್ನು ನಿನ್ನ ಜೊತೆ ಕರೆದುಕೊಂಡು ಹೋಗು" ಎಂದು ಉದ್ಧವನು ಅವನಲ್ಲಿ ದೀನನಾಗಿ ಕೋರಿಕೊಂಡನು. "ಉದ್ಧವ, ನಿನ್ನ ತಿಳುವಳಿಕೆ ಸರಿಯಾಗಿಯೇ ಇದೆ. ಇನ್ನು ಏಳು ದಿನಗಳಲ್ಲಿ ದ್ವಾರಕೆಯು ಸಮುದ್ರದಲ್ಲಿ ಮುಳುಗುತ್ತದೆ. ಯಾದವರು ತಮ್ಮ ದರ್ಪ, ದುರಹಂಕಾರಗಳಿಂದಾಗಿ ತಮ್ಮಲ್ಲೇ ಹೊಡೆದಾಡಿಕೊಂಡು ಸಾಯುತ್ತಾರೆ. ನೀನು ಮತ್ತೆ ಸಂಸಾರ ಬಂಧನದಲ್ಲಿ ಸಿಲುಕಬೇಡ. ಒಂದೆಡೆ ನೆಲೆಸದೆ ನೀನು ತೀರ್ಥಯಾತ್ರೆಗೆ ಹೊರಡು. ಸರ್ವ ಸಂಗಪರಿತ್ಯಾಗಕ್ಕಾಗಿ, ನೀತಿಯುಕ್ತ ಬದುಕಿಗಾಗಿ ಭೂಮಿಯಿಂದ ಕ್ಷಮಾಗುಣವನ್ನು, ವಾಯುವಿನಿಂದ ನಿರ್ಲಿಪ್ತತೆಯನ್ನು, ಆಕಾಶದಿಂದ ನಿರ್ದೋಷತ್ವವನ್ನು, ಜಲದಿಂದ ಪವಿತ್ರತೆಯನ್ನು, ಅಗ್ನಿಯಿಂದ ಶುಚಿತ್ವವನ್ನು, ಚಂದ್ರನಿಂದ ನಿರ್ವಿಕಾರ ಬುದ್ಧಿಯನ್ನು, ಸೂರ್ಯನಿಂದ ಸ್ವಾರ್ಥತ್ಯಾಗವನ್ನು, ಪಾರಿವಾಳದಿಂದ ಅತಿಸ್ನೇಹ ವರ್ಜ್ಯತ್ವವನ್ನು, ಹೆಬ್ಬಾವಿನಿಂದ ಲಭ್ಯವಾದದ್ದರಲ್ಲಿ ತೃಪ್ತಿಪಡುವುದನ್ನು, ಸಮುದ್ರದಿಂದ ಸುಖ-ದುಃಖಗಳನ್ನು ಒಂದೇ ಬಗೆಯಾಗಿ ಕಾಣಬೇಕೆನ್ನುವುದನ್ನು, ಜೇನುನೊಣದಿಂದ ಸಂಚರಿಸುತ್ತಾ ಇರಬೇಕೆಂಬುದನ್ನು, ಆನೆಯಿಂದ ಮೋಸವಾಗಬಾರದೆಂದು, ಜಿಂಕೆಯಿಂದ ಚಂಚಲಚಿತ್ತನಾಗಬಾರದೆಂದು, ಮೀನಿನಿಂದ ನಾಲಗೆ ರುಚಿಗೆ ಮರುಳಾಗಬಾರದೆಂದು, ವೇಶ್ಯೆಯಿಂದ ಹಣದಾಸೆ ಸಲ್ಲದೆಂಬುದನ್ನು, ಪಕ್ಷಿಯಿಂದ ಸಂಗ್ರಹಿಸಬಾರದೆಂಬ ಗುಣವನ್ನು, ಮಗುವಿನಿಂದ ಮಾನಾಪಮಾನದ ಅಭಿಮಾನವನ್ನು ತೊರೆಯಬೇಕೆಂಬುದನ್ನು, ಕನ್ಯೆಯಿಂದ ಏಕಾಕಿಯಾಗಿ ಇರಬೇಕು ಎಂಬುದನ್ನು, ಬಿಲ್ಲುಗಾರನಿಂದ ಏಕಾಗ್ರಚಿತ್ತವನ್ನು, ಹಾವಿನ ಗುಣದಲ್ಲಿ ವಾಸಮಾಡಿಯೂ ಮೌನದಿಂದಿರಬೇಕೆಂಬುದನ್ನು, ಜೇಡರಹುಳದಿಂದ ಪರಮಾತ್ಮ ಸೃಷ್ಟಿಸಿದ ಜಗತ್ತಿನ ಅಂತ್ಯವನ್ನು, ದುಂಬಿಯಿಂದ ಏನನ್ನು ಧ್ಯಾನಿಸುತ್ತೇವೋ ಅದನ್ನೇ ದೊರಕಿಸಿಕೊಳ್ಳುತ್ತೇವೆ ಎಂಬುದನ್ನು ತಿಳಿದು ನಾವು ಜೀವನವನ್ನು ಸಾಗಿಸಬೇಕಾಗಿದೆ. ಇದೇ ಪ್ರಕೃತಿಯಲ್ಲಿನ ಗುರುಗಳಾಗಿವೆ. ಕರ್ಮಯೋಗ ಮತ್ತು ಜ್ಞಾನಯೋಗಕ್ಕೆ ಭಕ್ತಿಯೋಗವೇ ತಳಹದಿಯಾಗಿದೆ" ಎಂದನು. ಉದ್ಧವನ ಕೋರಿಕೆಯಂತೆ ಆತನಿಗೆ ಭಾಗವತವನ್ನು ಉಪದೇಶಿಸಿದನು. "ಈ ಭಾಗವತವೇ ಭೂಲೋಕದಲ್ಲಿನ ಸಾತ್ವಿಕ ಜೀವರಾಶಿಗಳಿಗೆ ಮುಕ್ತಿಮಾರ್ಗವನ್ನು ಹೊಂದಲು ಪ್ರೇರಣೆಯಾಗಿದೆ. ಭಾಗವತವು ಕಲಿಯುಗದಲ್ಲಿ ನನ್ನ ಪ್ರತಿನಿಧಿ ಎನಿಸಿದೆ. ಯಾರು ಭಾಗವತವನ್ನು ಭಯಭಕ್ತಿಗಳಿಂದ ಪಠಿಸಿ ಆಚರಿಸುತ್ತಾರೋ ಅವರು ನನ್ನ ಸಾಮೀಪ್ಯವನ್ನು ಹೊಂದುತ್ತಾರೆ. ಇದರಲ್ಲಿ ಯಾವುದೇ ಸಂಶಯವಿಲ್ಲ. ಉದ್ಧವ, ನೀನು ಈಗ ತೀರ್ಥಯಾತ್ರೆಗೆ ಹೊರಡು. ಅಲ್ಲಿ ನರನಾರಾಯಣರ ಆಶ್ರಮವನ್ನು ಸೇರಿಕೊಂಡು ತಪಸ್ಸು ಮಾಡಿ ಭಗವಂತನ ಪಾದವನ್ನು ಸೇರು" ಎಂದು ತಿಳಿಸಿದನು.

ಶ್ರೀಕೃಷ್ಣನ ಊಹೆಯಂತೆಯೇ ಪ್ರಭಾಸಕ್ಷೇತ್ರಕ್ಕೆ ಬಂದ ಯಾದವರು ಮದ್ಯ ಕುಡಿದು ಸ್ಮೃತಿ ತಪ್ಪಿದರು. ಕಾಡುಹರಟೆಯೇ ಕಲಹವಾಗಿ ಪರಿಣಮಿಸಿತು. ಒನಕೆಯ ಪುಡಿಗಳಿಂದ ಹುಟ್ಟಿದ ಹುಲ್ಲನ್ನೇ ಕಿತ್ತು, ಚಾವಟಿ ಮಾಡಿಕೊಂಡು ಒಬ್ಬರಿಗೊಬ್ಬರು ಹೊಡೆದಾಡಿಕೊಂಡು ಅಸುನೀಗಿದರು. ಬಲರಾಮನು ದಂಡೆಯ ಮೇಲೆ ಕುಳಿತು ದೇಹತ್ಯಾಗ ಮಾಡಿದನು. ಶ್ರೀಕೃಷ್ಣನು ಮರದಡಿಯಲ್ಲಿ ಧ್ಯಾನ ಮಾಡುತ್ತಿರುವಾಗ ಮೀನುಗಾರನೊಬ್ಬನು ದೂರದಿಂದ ನೋಡಿ, ಒನಕೆಯ ತುಂಡಿದ್ದ ಬಾಣದಿಂದ ಶ್ರೀಕೃಷ್ಣನ ಪಾದಕ್ಕೆ ಗುರಿಯಿಟ್ಟು ಹೊಡೆದನು. ಕೃಷ್ಣನು ಅಲ್ಲಿಯೇ ದೇಹತ್ಯಾಗ ಮಾಡಿದನು. ಇದೆಲ್ಲವನ್ನೂ ನೋಡುತ್ತಾ ನಿಂತಿದ್ದ ಅರ್ಜುನನು ಬಹಳ ದುಃಖಪಟ್ಟನು. ಅವನು ಅಸುನೀಗಿದ ಎಲ್ಲ ಯಾದವರ ಅಂತ್ಯಕ್ರಿಯೆ ಮುಗಿಸಿ, ಅಳಿದುಳಿದ ಯಾದವರನ್ನು ಮತ್ತು ಯಾದವಸ್ತ್ರೀಯರನ್ನು ಹಸ್ತಿನಾವತಿಗೆ ಕರೆದುಕೊಂಡು ಬಂದನು. ಧರ್ಮರಾಯನು ಅರ್ಜುನನಿಂದ ನಡೆದ ವಿಷಯವನ್ನೆಲ್ಲಾ ತಿಳಿದು, ವೈರಾಗ್ಯ ತಾಳಿ ಅಭಿಮನ್ಯುವಿನ ಮಗನಾದ ಪರೀಕ್ಷಿತನಿಗೆ ರಾಜ್ಯಭಾರ ವಹಿಸಿ, ಸಹೋದರರು ಮತ್ತು ಪತ್ನಿಯೊಂದಿಗೆ ಸ್ವರ್ಗಾರೋಹಣ ಮಾಡಲು ಅರಮನೆಯನ್ನು ತ್ಯಜಿಸಿದನು. ದಾರಿಯಲ್ಲಿ ಎಲ್ಲರೂ ದೇಹತ್ಯಾಗ ಮಾಡಿ ಸ್ವರ್ಗ ಸೇರಿದರು. ಧರ್ಮರಾಯನು ಮಾತ್ರ ದೇಹಸಮೇತನಾಗಿ ಸ್ವರ್ಗ ಸೇರಿದನು.



# ಸ್ವಾಮಿ ವಿವೇಕಾನಂದರು ನಿರೂಪಿಸಿದ
# ನೀತಿಕಥೆಗಳು

ಡಾ. ಕೆ. ಅನಂತರಾಮು

## ವಿದ್ಯಾಸಾಗರರು ಕಲಿತ ಸಂಸ್ಕೃತಿಯ ಪಾಠ



ಸ್ವಾಮಿ ವಿವೇಕಾನಂದರು ಮೆಚ್ಚಿಕೊಂಡಿದ್ದ ಮಹಾಪುರುಷರಲ್ಲಿ ಈಶ್ವರಚಂದ್ರ ವಿದ್ಯಾಸಾಗರರೂ ಒಬ್ಬರು. ಅವರಿಂದ ವಿವೇಕಾನಂದರು ಸಾಕಷ್ಟು ಪ್ರಭಾವಿತರಾಗಿದ್ದರು. ಅವರು ಶ್ರೀರಾಮಕೃಷ್ಣ ಪರಮಹಂಸರ ಜನ್ಮಭೂಮಿ ಕಾಮಾರಪುಕುರಕ್ಕೆ ಸಮೀಪದ ವೀರಸಿಂಗ್ ಎಂಬ ಗ್ರಾಮದಲ್ಲಿ ಹುಟ್ಟಿದವರು. "ವಿದ್ಯಾಸಾಗರರೆಂದರೆ ಬಹುಪತ್ನಿ ಪದ್ಧತಿಯನ್ನು ನಿಲ್ಲಿಸಿದ, ವಿಧವಾವಿವಾಹವನ್ನು ಸಾಧ್ಯವಾಗಿಸಿದ ಮಹನೀಯರು. ಉತ್ತರ ಹಿಂದೂಸ್ತಾನದ ನನ್ನ ವಯಸ್ಸಿನ ಯಾರೊಬ್ಬರ ಮೇಲೂ ಅವರ ನೆರಳು ಬೀಳದೆ ಇರಲಾರದು" ಎಂದು ವಿವೇಕಾನಂದರೇ ಹೇಳಿದ್ದಾರೆ. "ಹೆಸರಿಗೆ ತಕ್ಕಂತೆ ಈಶ್ವರಚಂದ್ರರು ವಿದ್ಯಾಸಾಗರವೇ ಆಗಿದ್ದರು. ಅವರೊಬ್ಬ ಶಿಕ್ಷಣತಜ್ಞರೂ, ಬರಹಗಾರರೂ, ಸಮಾಜಸೇವಕರೂ, ಪರೋಪಕಾರಿಗಳೂ, ಸ್ವಾತಂತ್ರ್ಯಪ್ರೇಮಿಗಳೂ, ಮಾತೃಭಕ್ತರೂ, ಸರಳತೆಯ ಸಾಕಾರ ಮೂರ್ತಿಯೂ ಆಗಿದ್ದರು. ಅವರು ತಮ್ಮ ಆದಾಯದ ಬಹುಭಾಗವನ್ನು ವಿಧವೆಯರ, ದಿಕ್ಕಿಲ್ಲದವರ, ದರಿದ್ರರ, ಅನಾಥರ ಕಣ್ಣೀರು ಒರೆಸಲೆಂದೇ ವಿನಿಯೋಗಿಸುತ್ತಿದ್ದರು. ಅವರ ಸಹಾನುಭೂತಿ ಮಾನವಕುಲಕ್ಕಷ್ಟೇ ಸೀಮಿತವಾಗಿರಲಿಲ್ಲ. ಕರುಗಳಿಗೆ ಹಾಲು ದೊರೆಯಲಿ ಎಂದು ಅನೇಕ ವರ್ಷಗಳ ಕಾಲ ಅವರು ಹಾಲನ್ನೇ ಕುಡಿಯಲಿಲ್ಲ. ಕುದುರೆಗಳಿಗೆ ಕಷ್ಟಕೊಡಬೇಕಾಗುತ್ತದೆಯೆಂದು ಗಾಡಿಯನ್ನೇ ಹತ್ತುತ್ತಿರಲಿಲ್ಲ" ಎಂದು ಮುಂತಾಗಿ ಮಾಸ್ಟರ್ ಮಹಾಶಯರು ವಿದ್ಯಾಸಾಗರರ ಗುಣಾವಳಿಗಳನ್ನು ಎತ್ತಿಹಿಡಿದಿದ್ದಾರೆ. ಭಾರತೀಯ ಸಂಸ್ಕೃತಿಯ ಸಂರಕ್ಷಕರಲ್ಲಿ ಒಬ್ಬರಾಗಿದ್ದ ಅವರು, ಸಂಸ್ಕೃತಿಯ ಪಾಠವೊಂದನ್ನು ಅನಿರೀಕ್ಷಿತವಾಗಿ ಕಲಿತ ಸನ್ನಿವೇಶದ ಕಥೆಯೊಂದನ್ನು ಸ್ವಾಮಿ ವಿವೇಕಾನಂದರು ಸ್ವಾರಸ್ಯಮಯವಾಗಿ ಬಿತ್ತರಿಸಿದ್ದಾರೆ.

ಈಶ್ವರಚಂದ್ರ ವಿದ್ಯಾಸಾಗರರು ಒಂದುದಿನ ಶಾಸನಸಭೆಯ ಕಾರ್ಯಕಲಾಪಗಳನ್ನು ಮುಗಿಸಿಕೊಂಡು ಕಾಲ್ನಡಿಗೆಯಲ್ಲಿಯೇ ಮನೆಯತ್ತ ಬರುತ್ತಿದ್ದರು. ಆಂಗ್ಲರ ರಾಜ್ಯಭಾರದ ಕಾಲವಾಗಿದ್ದರಿಂದ, ಅವರು ಶಾಸನಸಭೆಗೆಂದು ಆಂಗ್ಲಪೋಷಾಕನ್ನು ಧರಿಸಿಕೊಂಡು ಹೋಗಿದ್ದರು. ಮಿಕ್ಕ ಸಮಯದಲ್ಲೆಲ್ಲ ಅವರು ಹಿಂದೂ ವೇಷಭೂಷಣದಲ್ಲಿಯೇ ಇರುತ್ತಿದ್ದರು. ದಾರಿ ನಡೆಯುವಾಗ ಅವರು, 'ಶಾಸನಸಭೆಗೆ ಹೋಗುವಾಗ ನನ್ನ ಸಹಜವಾದ ವೇಷದಿಂದ ನಾನು ಹೋದರಾಗದೆ? ಈ ಆಂಗ್ಲ ಪೋಷಾಕೇ ನನಗೆ ಬೇಕೆ?' ಎಂದು ಆಲೋಚಿಸುತ್ತಾ, ನಿಧಾನವಾಗಿ ಹೆಜ್ಜೆಗಳನ್ನಿಡುತ್ತ ಬರುತ್ತಿದ್ದರು. ಅದೇ ದಾರಿಯಲ್ಲಿ ವಿದ್ಯಾಸಾಗರರಿಗಿಂತ ಸ್ವಲ್ಪ ಮುಂದೆ, ಒಬ್ಬ ಸ್ಥೂಲಕಾಯದ ಮೊಘಲ್‌ಪುರುಷನು, ತನ್ನ ಸಂಸ್ಕೃತಿಗೆ ಒಪ್ಪುವ ಉಡುಪುಗಳನ್ನು ಧರಿಸಿಕೊಂಡು, ನಿಧಾನವಾಗಿ ಹೆಜ್ಜೆಯಿಡುತ್ತ ತನ್ನ ಮನೆಯತ್ತ ನಡೆದು ಹೋಗುತ್ತಿದ್ದನು.

ಆಗ ಇದ್ದಕ್ಕಿದ್ದಂತೆ ಮೊಘಲನಿಗೆ ಪರಿಚಿತನಾದ ಯಾರೋ ಒಬ್ಬ ವ್ಯಕ್ತಿಯು ಓಡೋಡಿ ಬಂದು, ಆ ಮೊಘಲನನ್ನು ಕುರಿತು, "ಸ್ವಾಮಿ, ನಿಮ್ಮ ಮನೆಗೆ ಬೆಂಕಿ ಬಿದ್ದಿದೆ, ಹೊತ್ತಿ ಉರಿಯುತ್ತಿದೆ. ನೀವು ಬೇಗನೆ ಬರಬೇಕು" ಎಂದು ಏದುಸಿರು ಬಿಡುತ್ತ ಸುದ್ದಿಮುಟ್ಟಿಸಿದನು. ಅದನ್ನು ಕೇಳಿದ ಮೊಘಲನಾದರೋ, "ಓಹೋ, ಬೆಂಕಿಬಿದ್ದಿತೇನು, ಸರಿಯೆ" ಎನ್ನುತ್ತ, ತನ್ನ ಎಂದಿನ ಶೈಲಿಯಲ್ಲಿಯೇ ಸಾವಕಾಶವಾಗಿ ಹೆಜ್ಜೆಗಳನ್ನಿಡುತ್ತ ಸಾಗಿದನು. ವಿದ್ಯಾಸಾಗರರು ಆ ವಿದ್ಯಮಾನವನ್ನೆಲ್ಲ ಕುತೂಹಲದಿಂದ ನೋಡುತ್ತಿದ್ದರು. ಸುದ್ದಿಮುಟ್ಟಿಸಿದ ಪುರುಷನು ಮೊಘಲನ ವರ್ತನೆಯನ್ನು ಕಂಡು ಆಶ್ಚರ್ಯಚಕಿತನಾಗಿ, "ಇದೇನಿದು ಸ್ವಾಮಿ, ಮನೆ ಹತ್ತಿ ಉರಿಯುತ್ತಿದ್ದರೂ ಹೀಗೆ ನಿಧಾನವಾಗಿಯೇ ಹೆಜ್ಜೆಯಿಡುತ್ತಿದ್ದೀರಲ್ಲ, ಸ್ವಲ್ಪ ಚುರುಕು ಮಾಡಬಾರದೆ?" ಎಂದು ಆಕ್ಷೇಪಿಸುವ ಧ್ವನಿಯಲ್ಲಿ ಹೇಳಿದನು. ಆಗ ಆ ಮೊಘಲನು ಕೋಪಗೊಂಡು ಸುದ್ದಿವಾಹಕನತ್ತ ತಿರುಗಿ, "ಅಯ್ಯಾ ಮೂರ್ಖ, ಮನೆ ಉರಿದು ಹೋಗುತ್ತಿದೆಯೆಂದರೆ ಒಂದಿಷ್ಟು ಕಂಬಗಳು, ಬೊಂಬುಗಳು, ಗಳುಗಳು, ಹಲಗೆಗಳು ನಾಶವಾಗುತ್ತಿವೆ ತಾನೆ! ಅಷ್ಟುಮಾತ್ರದಿಂದ ನಾನು ನನ್ನ ತಲೆತಲಾಂತರದಿಂದ ಬಂದ ನಡಗೆಯ ಶೈಲಿಯನ್ನೇ ಬದಲಾಯಿಸಿಬಿಡಬೇಕೆ? ಆಗದಾಗದು" ಎಂದು ಹೇಳಿ ನಿಧಾನವಾಗಿಯೇ ಮುನ್ನಡೆದನು. ಈಶ್ವರಚಂದ್ರರಿಗೆ ಆ ಮೊಘಲನ ಮಾತಿನ ಅಂತರಾಳದಲ್ಲಿದ್ದ

ಸಂಸ್ಕೃತಿಯ ತಿರುಳು ತುಂಬಾ ಪ್ರಿಯವಾಯಿತು. ತನ್ನ ಮನೆಯೇ ಬೆಂದುಹೋಗುತ್ತಿದ್ದರೂ ತನ್ನ ಜೀವನಶೈಲಿಯನ್ನು ಬದಲಾಯಿಸಲು ಇಷ್ಟಪಡದ ಆ ಮೊಘಲನ ನಿಲುವನ್ನು ಅವರು ಮನದಲ್ಲಿಯೇ ಮೆಚ್ಚಿಕೊಂಡರು. 'ಶಾಸನಸಭೆಗೆ ಹೋಗುವಾಗ ನಾನು ಆಂಗ್ಲವೇಷದಲ್ಲಿಯೇ ಹೋಗಬೇಕೇ' ಎಂಬ ಪ್ರಶ್ನೆಗೂ ಅವರಿಗೆ ಆಗಲೇ ಉತ್ತರ ಸಿಕ್ಕಿಬಿಟ್ಟಿತು. 'ಇನ್ನು ಮೇಲೆ ನಾನು ಶಾಸನಸಭೆಗೆ ಹೋಗುವಾಗಲೂ ಕೋಟುಬೂಟುಗಳನ್ನು ತೊಡುವುದಿಲ್ಲ; ನನ್ನ ಸಂಸ್ಕೃತಿಗೆ ಸಹಜವಾದ ಚಾದರ, ಧೋತಿ, ಚಪ್ಪಲಿಗಳಲ್ಲಿಯೇ ಇರುತ್ತೇನೆ' ಎಂದು ನಿರ್ಧರಿಸಿದರು.

ಶ್ರೀರಾಮಕೃಷ್ಣ ಪರಮಹಂಸರು ಕೂಡ ವಿದ್ಯಾಸಾಗರರನ್ನು ಬಹುವಾಗಿ ಮೆಚ್ಚಿಕೊಂಡಿದ್ದರು. ಅವರನ್ನು ಕಾಣಲೆಂದು ತಾವೇ ಖುದ್ದಾಗಿ ಅವರ ಬಂಗಲೆಗೆ ಹೋಗಿದ್ದರು. ಆ ಹೊತ್ತಿನಲ್ಲಿ ಪರಮಹಂಸರು ಆನಂದಭರಿತರಾಗಿ "ಆಹ! ಇಂದು ನಾನು ಸಾಗರಕ್ಕೇ ಬಂದು ಸೇರಿಬಿಟ್ಟಿದ್ದೇನೆ. ಇಲ್ಲಿಯವರೆಗೆ ಕಾಲುವೆ, ಜೌಗುಭೂಮಿ, ಅತಿ ಹೆಚ್ಚೆಂದರೆ ನದಿ – ಇವನ್ನು ನೋಡಿದ್ದೆ. ಆದರೆ ಸಾಗರವೇ ಇಂದು ನನ್ನ ಕಣ್ಣೆದುರಿಗೆ ಇದೆ" ಎಂದು ಹೇಳಿದರು. ವಿನೋದಪ್ರಿಯರಾದ ವಿದ್ಯಾಸಾಗರರು ಆಗ "ಹಾಗಾದರೆ ಇಲ್ಲಿಂದ ತೆಗೆದುಕೊಂಡು ಹೋಗಿ ಸ್ವಲ್ಪ ಉಪ್ಪು ನೀರನ್ನು" ಎಂದರು. ಅದಕ್ಕೆ ರಾಮಕೃಷ್ಣರು "ಇಲ್ಲ, ಇಲ್ಲ, ನಾನೇಕೆ ಉಪ್ಪುನೀರು ತೆಗೆದುಕೊಂಡು ಹೋಗಲಿ? ನೀನು ಅವಿದ್ಯೆಯ ಸಾಗರವೇನಲ್ಲ, ವಿದ್ಯೆಯ ಸಾಗರ. ನೀನು ಕ್ಷೀರಸಮುದ್ರ" ಎಂದು ಹೇಳಿದರು. ಪರಮಹಂಸರಿಂದ ವಿದ್ಯಾಸಾಗರರು ಹೀಗೆಲ್ಲ ಕೊಂಡಾಡಿಸಿಕೊಂಡರೆಂದರೆ ಅದೇನು ಸಾಮಾನ್ಯ ಸಂಗತಿಯೆ !

## ಅಭಯದಾತೆ ಶ್ರೀಮಾತೆ



ಒಬ್ಬ ಸಂನ್ಯಾಸೀ ಶಿಷ್ಯ ಶ್ರೀಮಾತೆಗೆ ತುಂಬಾ ನಿರಾಸೆಯಿಂದ ಕಾಗದ ಬರೆದಿದ್ದ. ಅದರ ವಿಷಯವನ್ನು ಕೇಳಿದ ಶ್ರೀಮಾತೆ ದೃಢ ಗಂಭೀರವಾಣಿಯಿಂದ, "ಅದು ಹೇಗೆ ಸಾಧ್ಯ? ಶ್ರೀಗುರುದೇವರ ಹೆಸರು ಕೆಲಸಕ್ಕೆ ಬಾರದುದೆ? ಯಾರು ಇಲ್ಲಿಗೆ ಬಂದು ಅವರನ್ನು ಕುರಿತು ಯೋಚಿಸುತ್ತಾರೆಯೋ ಅವರು ಒಂದಲ್ಲ ಒಂದು ದಿನ ತಮ್ಮ ಇಷ್ಟದೈವವನ್ನು ನೋಡಿಯೇ ನೋಡುತ್ತಾರೆ. ಬದುಕಿರುವ ಕಾಲದಲ್ಲಿ ಅದು ಸಾಧ್ಯವಿಲ್ಲದೇ ಇದ್ದರೂ ಅಂತ್ಯಕಾಲದಲ್ಲಾದರೂ ಅವರು ಆತನನ್ನು ನೋಡುವರು" ಎಂದರು.

*('ಶ್ರೀಶಾರದಾದೇವಿ ಸಂಭಾಷಣೆ' ಗ್ರಂಥದಿಂದ, ಪು.೧೭೩)*

**ಸೋದರಿ ಸುಬ್ಬಲಕ್ಷ್ಮಿ**

ಪ್ರಕಾಶಕರು: ಪ್ರವ್ರಾಜಿಕ ಅಮಲಪ್ರಾಣಾ
ರಾಮಕೃಷ್ಣ ಶಾರದಾ ಮಿಷನ್
ದಕ್ಷಿಣೇಶ್ವರ, ಕೋಲ್ಕತ್ತಾ – ೭೦೦ ೦೭೬
ಪುಟ ಸಂಖ್ಯೆ: ೭೫.
ಬೆಲೆ: ರೂ: ೫/–





**ದಿವ್ಯತ್ರಯರ ಕಾವ್ಯಗಂಗೆ**

ರಚನೆ: ಎಂ.ಜಿ.ಗಂಗನಪಳ್ಳಿ
ಪ್ರಕಾಶಕರು: ಸ್ವಾಮಿ ಅಭಯಾನಂದ
ರಾಮಕೃಷ್ಣ ವಿವೇಕಾನಂದ ವೇದಾಂತಾಶ್ರಮ,
# ೧೨೬೭, ಹೆಚ್.ಐ.ಜಿ., ೧೨ನೇ
'ಬಿ' ಮುಖ್ಯ ರಸ್ತೆ, ಯಲಹಂಕ ಉಪನಗರ,
ಬೆಂಗಳೂರು – ೬೪.
ಪುಟ ಸಂಖ್ಯೆ: ೬೭.
ಬೆಲೆ: ರೂ. ೬೦/–

ದಿವ್ಯತ್ರಯರ ಜೀವನಚರಿತ್ರೆ ಹಾಗೂ ಉಪದೇಶಾಮೃತದ ಸುಮಾರು ೪೦ ವರ್ಷಗಳ ತೀವ್ರ ಅಧ್ಯಯನ ಫಲವಾಗಿ ಮೂಡಿಬಂದ ಕವಿತಾ ಸಂಕಲನದ ಸುಂದರ ಪುಷ್ಪಮಾಲೆಯೇ ಈ 'ದಿವ್ಯತ್ರಯರ ಕಾವ್ಯಗಂಗೆ.' ಮೈಸೂರಿನ 'ವಿವೇಕಪ್ರಭ', ಧಾರವಾಡದ 'ನವಚಿಂತನ' ಮುಂತಾದ ಪತ್ರಿಕೆಗಳಲ್ಲಿ ಆಗಾಗ್ಗೆ ಪ್ರಕಟಣೆಗೊಂಡು ಭಕ್ತರ, ಸಾಹಿತ್ಯಾಸಕ್ತರ ಪ್ರಶಂಸೆಗೆ ಪಾತ್ರವಾದ ಸುನೀತ (ಸಾನೆಟ್) ಗಳಿವು.

೬೭ ಪುಟಗಳ ಈ ಸುಂದರ ಪುಷ್ಪಮಾಲೆಯಲ್ಲಿ ೫೧ ಅಪರೂಪದ ದಿವ್ಯಪುಷ್ಪಗಳು ಸುಂದರವಾಗಿ, ಕಂಪನ್ನು ಬೀರುತ್ತಾ ಅರಳಿ ನಿಂತಿವೆ. 'ಲೋಕಗುರುವೆ ತವಪಾದಪದ್ಮಕ್ಕೆ ನಮನ' ಎನ್ನುತ್ತಾ ಶ್ರೀರಾಮಕೃಷ್ಣರಿಗೆ ಮೂರು ಸುನೀತಗಳನ್ನರ್ಪಿಸಿದ್ದಾರೆ. ಇನ್ನು 'ಶ್ರೀಮಾತೆ ತವಚರಣದಾಸೆಯೇ ಪೊರೆಯುವುದು...' ಎನ್ನುತ್ತಾ ಶ್ರೀಶಾರದಾದೇವಿಯವರಿಗೆ ಮೂರು ಸುನೀತಗಳನ್ನು ಅರ್ಪಿಸಿದ್ದಾರೆ. 'ಗುರುವೆಂದು ನಮಿಸಿ ಇವನ ಪಾದಕೆರಗಿತ್ತು ಜನ' ಮುಂತಾದ ಸ್ವಾಮಿ ವಿವೇಕಾನಂದರನ್ನು ಕುರಿತ ೪೫ ಸುನೀತಗಳು ಈ ಕೃತಿಯ ಹೆಚ್ಚಿನ ಪುಟಗಳನ್ನು ವ್ಯಾಪಿಸಿವೆ.

'ವಂಗನಾಡಿನ ತುಂಗ ಯೋಗಿಯೆ...', ಮೊದಲಾದ ಕವನಗಳಲ್ಲಿ ಕವಿಯ ಶೈಲಿ, ವಸ್ತುವಿನ ಆಯ್ಕೆಯ ಗುಣಮಟ್ಟಗಳ ಪರಿಚಯವಾಗುವುದು. ಒಟ್ಟಿನಲ್ಲಿ ಉತ್ತಮ ಕವಿಗಳ ಗುಂಪಿಗೆ ಸೇರುವ ಗಂಗನಪಳ್ಳಿಯವರು ಸರಳವಾಗಿ, ಸುಲಭವಾಗಿ, ಮುಂಜಾನೆಯ ಮಂಜಿನಂತೆ ಸದ್ದಿಲ್ಲದೆ ಓದುಗರ ಮನವನ್ನು ಅಪಹರಿಸುತ್ತಾರೆ. ಭಕ್ತರಿಗೆ, ಸಹೃದಯರಿಗೆ, ಸಾಹಿತ್ಯಾಭಿಮಾನಿಗಳಿಗೆ ಇದೊಂದು ರಸಾನುಭೂತಿಯೇ ಸರಿ. ಮನಸ್ಸಿಗೆ ಆನಂದ, ಬುದ್ಧಿಗೆ ಪ್ರಚೋದನೆ, ಹೃದಯಕ್ಕೆ ಭಾವಸ್ಫುರಣೆಯನ್ನು ತರುತ್ತದೆ ಈ ಕವನ ಸಂಕಲನ.

ಭಾರತೀಯ ನಾರಿಯ ಉಜ್ವಲ ಭವಿಷ್ಯ ಹೇಗಿರಬೇಕೆಂದು ವಾರಗಟ್ಟಲೆ, ತಿಂಗಳುಗಟ್ಟಲೆ ಚಿಂತಿಸುತ್ತಿದ್ದ ಸ್ವಾಮಿ ವಿವೇಕಾನಂದರ ಚಿಂತನೆಯ ಸಾಕಾರರೂಪವೇ 'ಸೋದರಿ ಸುಬ್ಬಲಕ್ಷ್ಮಿ'ಯ ಜೀವನಗಾಥೆ. ಪಾಶ್ಚಾತ್ಯ ಸ್ತ್ರೀಯರ ಸ್ವಾತಂತ್ರ್ಯ, ಉತ್ಸಾಹ, ಕ್ರಿಯಾಶೀಲತೆಯೊಂದಿಗೆ ಭಾರತೀಯ ಸ್ತ್ರೀಯರ ನಿಯಮಬದ್ಧ ಪವಿತ್ರ ಸತ್‌ಶೀಲತೆಯ ಸಮ್ಮಿಳನವೇ ಸುಬ್ಬಲಕ್ಷ್ಮಿ. ವಿಧವೆಯರ ಗೋಳಾಟ, ತಿಕ್ಕಾಟಗಳಿಗೆ ಸವಾಲಾಗಿ ನಿಂತ ಸುಬ್ಬಲಕ್ಷ್ಮಿ ಸಮಾಜ ಸುಧಾರಕಳಲ್ಲ; ಆದರೆ ಸಮಾಜದಲ್ಲಿ ತಾನಾಗಿಯೇ ಮೊಳಕೆಯೊಡೆದಂತೆ ಯಾವುದೇ ಸದ್ದುಗದ್ದಲವಿಲ್ಲದೆ ಸುಧಾರಣೆ ಮೂಡಿಸಿ ಬಾಲ ವಿಧವೆಯರ ಪಾಲಿಗೆ ಸೋದರಿಯಾದಳು; ದಾರಿ ದೀಪವಾದಳು.

ಹಿಂದೂ ಬ್ರಾಹ್ಮಣರ ಸಂಪ್ರದಾಯಸ್ಥ ಕುಟುಂಬದಲ್ಲಿ ಜನಿಸಿ, ಹನ್ನೊಂದು ವರ್ಷಕ್ಕೇ ಗೃಹಸ್ಥಾಶ್ರಮಕ್ಕೆ ಕಾಲಿಟ್ಟ ಪುಟ್ಟ ಸುಬ್ಬಲಕ್ಷ್ಮಿಯು ಕೆಲವೇ ವಾರಗಳಲ್ಲಿ ಬಾಲವಿಧವೆಯರ ಗುಂಪಿಗೆ ಸೇರಿದಳು! ಆದರೂ ತಂದೆತಾಯಿಯರು, ವಿಶೇಷವಾಗಿ ತಂದೆಯವರು ಕುಟುಂಬ, ಸಮಾಜ ಎಲ್ಲವನ್ನೂ ಎದುರಿಸಿ, ಮಗಳಿಗೆ ಹೆಚ್ಚಿನ ವಿದ್ಯಾಭ್ಯಾಸ ಕೊಡಿಸಿ, ಅವಳ ಉಜ್ವಲ ಭವಿಷ್ಯಕ್ಕೆ ಕಾರಣೀಭೂತರಾದರು. ಇಪ್ಪತ್ತನೇ ಶತಮಾನದ ಆದಿಭಾಗದಲ್ಲಿ ಅಂಧಕಾರ ಆವರಿಸಿದ್ದ ರಾಜಕೀಯ ಮತ್ತು ಸಾಮಾಜಿಕ ಪರಿಸ್ಥಿತಿಯಲ್ಲಿ ಬಾಲವಿಧವೆ ಸುಬ್ಬಲಕ್ಷ್ಮಿ ಬಿ.ಎ.ಆನರ್ಸ್, ಎಲ್.ಎಲ್.ಬಿ ಪದವಿಗಳನ್ನು ಪಡೆದು ಮುಂದೆ ಶಿಕ್ಷಕಿ, ಲೇಖಕಿಯಾಗಿ ಮುಂದೆ 'ಶಾರದಾ ವಿದ್ಯಾಲಯ'ದ ಸಂಸ್ಥಾಪಕಳೂ ಆದಳು. ವಿಧಾನ ಪರಿಷತ್ತಿನ ಸದಸ್ಯೆಯಾಗಿ "ಪದ್ಮಶ್ರೀ" ಪ್ರಶಸ್ತಿಯ ಗೌರವಕ್ಕೆ ಪಾತ್ರಳಾದ ರೋಮಾಂಚನಕಾರಿ ಹೋರಾಟವನ್ನು ಸುಂದರವಾದ ಭಾಷೆ ಹಾಗೂ ಶೈಲಿಯಲ್ಲಿ ಈ ಸಣ್ಣ ಪುಸ್ತಕದಲ್ಲಿ ವರ್ಣಿಸಲಾಗಿದೆ. ೮೩ ವರ್ಷಗಳ ಅವಳ ಸುದೀರ್ಘ ಜೀವನಗಾಥೆಯನ್ನು ಹೊತ್ತ ಈ ಕಿರುಹೊತ್ತಿಗೆಯು ಓದುಗರನ್ನು ಭಾವಪರವಶರನ್ನಾಗಿಯೂ, ಕಾಲಾತೀತರನ್ನಾಗಿಯೂ ಮಾಡುವುದರಲ್ಲಿ ಸಂದೇಹವಿಲ್ಲ. ಹಿಂದಿನ ಯುಗದ ಆದರ್ಶ ಸೀತೆ, ಸಾವಿತ್ರಿ, ದಮಯಂತಿಯರಾದರೆ, ಇಂದಿನ ಯುಗದ ಆದರ್ಶಸ್ತ್ರೀಯರ ಗುಂಪಿಗೆ ಸೇರುತ್ತಾಳೆ ನಮ್ಮ ನೆಚ್ಚಿನ ಸೋದರಿ ಸುಬ್ಬಲಕ್ಷ್ಮಿ. ಕಾಲೇಜಿನ ಯುವತಿಯರು ಓದಲೇಬೇಕಾದ ಪುಸ್ತಕವಿದು.

*ಕೆ.ವಿ.ಸ್ವರ್ಣಗೌರಿ*

# ಮಣಿಕಂಠ

**ಕಥೆ : ಜಯಶ್ರೀ** **ಗ್ರಾಫಿಕ್ಸ್ : ಶಂಕರ್**

**1** ಅಯ್ಯಪ್ಪ ಸ್ವಾಮಿಯು ಶಿವ ಹಾಗೂ ವಿಷ್ಣುವಿನ ಅವತಾರವೆಂದು ಹೇಳುತ್ತಾರೆ. ಪಂಪಾನದಿಯ ದಡದಲ್ಲಿ ಒಂದು ಶಿಶುವಿನ ರೂಪದಲ್ಲಿ ಮಲಗಿದ್ದ ಅವನ ಕೊರಳಲ್ಲಿ ಥಳಥಳಿಸುವ ಒಂದು ಮಣಿಹಾರವಿತ್ತು.

**2** ಪಂದಳ ದೇಶದ ರಾಜನಾದ ರಾಜಶೇಖರನಿಗೆ ಮಕ್ಕಳಿರಲಿಲ್ಲ. ಅವನು ಕಾಡಿನಲ್ಲಿ ಬೇಟೆಯಾಡುತ್ತ ಬಂದವನು ಅಳುತ್ತಿರುವ ಮಗುವಿನ ಆಕ್ರಂದನವನ್ನು ಕೇಳಿಸಿಕೊಂಡ. ಅಷ್ಟರಲ್ಲಿ ಅಲ್ಲಿಗೆ ಒಬ್ಬ ಸಂನ್ಯಾಸಿ ಬಂದ.




**3** ತಮಗೆ ದೊರಕಿದ ಮಗುವಿನಿಂದಾಗಿ ರಾಜ, ರಾಣಿಯರು ಅತ್ಯಂತ ಆನಂದಗೊಂಡಿದ್ದರು. ಆದರೆ ಮಂತ್ರಿಗೆ ಇದರಿಂದ ಸಂತೋಷವಾಗಲಿಲ್ಲ.




**4** ಮಣಿಕಂಠನಿಗೆ ಐದು ವರ್ಷ ವಯಸ್ಸಾಯಿತು. ರಾಜ ಅವನನ್ನು ವಿದ್ಯಾಭ್ಯಾಸಕ್ಕಾಗಿ ಒಬ್ಬ ಗುರುವಿನ ಬಳಿಗೆ ಕಳುಹಿಸಿದನು. ವಿದ್ಯಾಭ್ಯಾಸ ಮುಗಿದ ನಂತರ ...



**5** ಮಣಿಕಂಠ ಒಂದು ಬಿಲ್ವದಳ ಹಾಗೂ ಒಂದು ತುಳಸೀದಳವನ್ನು ಹಾಲಿಗೆ ಹಾಕಿದ. ಮಂತ್ರವೊಂದನ್ನು ಪಠಿಸಿ, ಅದಕ್ಕೆ ಒಂದಿಷ್ಟು ಭಸ್ಮವನ್ನೂ ಹಾಕಿದ. ಅದನ್ನು ಗುರುಗಳ ಮಗನಿಗೆ ಕುಡಿಯಲು ಕೊಟ್ಟ. ಆಶ್ಚರ್ಯ! ಆ ಹುಡುಗನಿಗೆ ಕಣ್ಣು ಕಾಣಿಸಿತು, ಮಾತು ಬಂತು.




**6** ಮಣಿಕಂಠ ತನ್ನ ವಿದ್ಯಾಭ್ಯಾಸ ಮುಗಿಸಿ ಅರಮನೆಗೆ ಮರಳಿದ. ಕೆಲವು ವರ್ಷಗಳ ನಂತರ ರಾಣಿ ಒಂದು ಗಂಡುಮಗುವಿಗೆ ಜನ್ಮವಿತ್ತಳು. ಅವನಿಗೆ ರಾಜರಾಜ ಎಂದು ಹೆಸರಿಟ್ಟರು. ರಾಜ, ರಾಣಿಯರು ತಮ್ಮ ಇಬ್ಬರೂ ಮಕ್ಕಳನ್ನು ಕಣ್ಣೊಂಬೆಯಂತೆ ನೋಡಿಕೊಂಡರು.

**7** ಕ್ರಮೇಣ ರಾಜ ಮುದುಕನಾದ. ಅವನು ಮಣಿಕಂಠನಿಗೆ ಪಟ್ಟಾಭಿಷೇಕ ಮಾಡಲು ನಿರ್ಧರಿಸಿದ. ಈ ವಿಷಯ ಮಂತ್ರಿಗೆ ಗೊತ್ತಾಯಿತು.







**8** ಮಂತ್ರಿಯ ಸಲಹೆಯ ಪ್ರಕಾರ ರಾಣಿಯು ತನಗೆ ವಿಪರೀತ ತಲೆನೋವು ಆಗಿರುವಂತೆ ನಟಿಸಿದಳು. ರಾಜನಿಗೆ ಚಿಂತೆಯಾಯಿತು. ಹಲವು ಮಂದಿ ವೈದ್ಯರು ಅವಳಿಗೆ ಚಿಕಿತ್ಸೆ ಮಾಡಿದರು. ಆದರೆ ಪ್ರಯೋಜನವಾಗಲಿಲ್ಲ.



**9** ದುಷ್ಟಮಂತ್ರಿಯು ಒಬ್ಬ ನಕಲಿ ವೈದ್ಯನನ್ನು ಕರೆತಂದ.




**10** ಹುಲಿಯ ಹಾಲನ್ನು ತರಲು ಹಲವರು ಕಾಡಿಗೆ ಹೊರಟರು. ಆದರೆ ಯಾರಿಗೂ ಅದು ಸಾಧ್ಯವಾಗಲಿಲ್ಲ.

ಅಷ್ಟರಲ್ಲಿ ಮಣಿಕಂಠ ರಾಜನ ಬಳಿಗೆ ಬಂದ.




**11** ರಾಜನಿಗೆ ಮಣಿಕಂಠನನ್ನು ಕಾಡಿಗೆ ಕಳುಹಿಸಿ ಕೊಡಲು ಮನಸ್ಸಿರಲಿಲ್ಲ.
ಏಕೆಂದರೆ ಅವನ ಮೇಲೆ ರಾಜನಿಗೆ ಅತ್ಯಂತ ಪ್ರೀತಿ. ಆದರೂ ಮಣಿಕಂಠ ಹಠ ಮಾಡಿದ್ದರಿಂದ ರಾಜ ಅದಕ್ಕೆ ಅರೆ ಮನಸ್ಸಿನಿಂದ ಒಪ್ಪಲೇಬೇಕಾಯಿತು.
ಮಣಿಕಂಠ ತಾಯಿಯಿಂದ ಬೀಳ್ಕೊಟ್ಟ. ಅವನನ್ನು ಕಳುಹಿಸಿಕೊಡಲು ತನಗೂ ಮನಸ್ಸಿಲ್ಲವೆಂಬಂತೆ ಅವಳು ನಟಿಸಿದಳು.




**12** ಮಹಿಷಿಯೆಂಬ ರಾಕ್ಷಸಿ ದೇವತೆಗಳಿಗೆಲ್ಲ ಹಲವು ಬಗೆಯಲ್ಲಿ ಉಪಟಳ ನೀಡುತ್ತಿದ್ದಳು. ಕಾಡಿನಲ್ಲಿ ದೇವತೆಗಳು ಮಣಿಕಂಠನ ಮುಂದೆ ಕಾಣಿಸಿಕೊಂಡು, ಅವನು ಜನ್ಮವೆತ್ತಿ ಬಂದುದರ ಉದ್ದೇಶವನ್ನು ನೆನಪಿಸಿದರು.



**13** ದೇವತೆಗಳ ಪ್ರಾರ್ಥನೆಗೆ ಸಮ್ಮತಿಸಿದ ಮಣಿಕಂಠನು ಮಹಿಷಿಯೊಂದಿಗೆ ಅತ್ಯಂತ ಘೋರವಾದ ಯುದ್ಧ ಮಾಡಿ ಅವಳ ವಧೆಯನ್ನು ಮಾಡಿದ.




**14** ಮಣಿಕಂಠ! ನೀನು ಸಾಮಾನ್ಯ ವ್ಯಕ್ತಿಯಲ್ಲ! ನೀನು ಶಿವ ಹಾಗೂ ವಿಷ್ಣು ಇವರಿಬ್ಬರ ಅಂಶದಿಂದ ಹುಟ್ಟಿದ ದಿವ್ಯ ಶಿಶುವಾಗಿದ್ದೀಯೆ. ದಯವಿಟ್ಟು ಈ ಹುಲಿಗಳನ್ನು ಹಿಂದಕ್ಕೆ ಕಳುಹಿಸು.




**15** ಅಪ್ಪಾ, ನಿಮಗೇನು ವರ ಬೇಕು ಎಂದು ತಿಳಿಸಿ.




**16** ಅಗಸ್ತ್ಯ ಮುನಿಗಳ ನಿರ್ದೇಶನದಂತೆ ರಾಜನು ಶಬರಿಮಲೆ ಎಂಬ ಪರ್ವತಪ್ರದೇಶದಲ್ಲಿ ಹದಿನೆಂಟು ಮೆಟ್ಟಿಲುಗಳಿರುವ ಒಂದು ದೇವಾಲಯವನ್ನು ನಿರ್ಮಿಸಿದ. ಪರಶುರಾಮನು ಅಲ್ಲಿ ಮಣಿಕಂಠನ ಮೂರ್ತಿಯನ್ನು ಪ್ರತಿಷ್ಠಾಪಿಸಿದ.

ಶಬರಿಮಲೆಯ ದೇವಾಲಯವು ಇಂದಿಗೂ ಅಸಂಖ್ಯಾತ ಭಕ್ತರನ್ನು ಆಕರ್ಷಿಸುತ್ತಿದೆ. ಆ ಪ್ರದೇಶ ಶಾಂತಿ, ಸೌಹಾರ್ದ, ನೆಮ್ಮದಿಗಳ ತಾಣವಾಗಿ ನಿಂತಿದೆ.






## 'ನಾವು ಕಂಡಂತೆ ಸ್ವಾಮಿ ಯತೀಶ್ವರಾನಂದರು' ಕೃತಿಯ ಬಿಡುಗಡೆ



ಬಹುಕಾಲದಿಂದ ನಿರೀಕ್ಷಿಸಲಾಗಿದ್ದ 'Swami Yatiswarananda As We Knew Him' ಗ್ರಂಥವು ಜುಲೈ ೨೬ ರಂದು ಚೆನ್ನೈ ರಾಮಕೃಷ್ಣ ಮಠದಲ್ಲಿ ಬಿಡುಗಡೆ ಹೊಂದಿತು. ಶ್ರೀರಾಮಕೃಷ್ಣರ ಮಾನಸಪುತ್ರರೆಂದೇ ಪ್ರಸಿದ್ಧರಾದ, ರಾಮಕೃಷ್ಣ ಮಹಾಸಂಘದ ಪ್ರಥಮ ಅಧ್ಯಕ್ಷರೂ ಆಗಿದ್ದ ಸ್ವಾಮಿ ಬ್ರಹ್ಮಾನಂದ ಶಿಷ್ಯರಲ್ಲಿ ಪ್ರಮುಖರು ಸ್ವಾಮಿ ಯತೀಶ್ವರಾನಂದರು. 'Meditation and Spiritual Life', 'Adventures in Spiritual Life' ಎಂಬ ಆಧ್ಯಾತ್ಮಿಕ ಕ್ಷೇತ್ರದ ಮೇರುಕೃತಿಗಳನ್ನು ಬರೆದ ಪೂಜ್ಯ ಸ್ವಾಮೀಜಿಯವರು ಮುಂಬಯಿ, ಚೆನ್ನೈ, ಬೆಂಗಳೂರು ಮೊದಲಾದ ರಾಮಕೃಷ್ಣ ಮಠದ ಕೇಂದ್ರಗಳಲ್ಲಿ ಅಧ್ಯಕ್ಷರಾಗಿದ್ದು, ಹಲವು ವರ್ಷಗಳ ಕಾಲ ವಿದೇಶಗಳಲ್ಲೂ ಶ್ರೀರಾಮಕೃಷ್ಣ ಮಹಾಸಂಘದ ಕಾರ್ಯಕ್ಕಾಗಿ ನಿಯುಕ್ತರಾಗಿದ್ದರು. ರಾಮಕೃಷ್ಣ ಮಹಾಸಂಘದ ಉಪಾಧ್ಯಕ್ಷರಲ್ಲಿ ಒಬ್ಬರೂ ಆಗಿದ್ದ ಸ್ವಾಮೀಜಿಯವರನ್ನು ಕುರಿತ ಸ್ಮೃತಿಲೇಖನಗಳನ್ನು ಒಳಗೊಂಡ ಈ ಕೃತಿಯಲ್ಲಿ ೧೦೦ಕ್ಕೂ ಹೆಚ್ಚು ಲೇಖನಗಳಿವೆ. ಹಿರಿಯ ಸಂನ್ಯಾಸಿಗಳು, ಸಂನ್ಯಾಸಿನಿಯರು ಹಾಗೂ ಇತರ ಭಕ್ತರು ಬರೆದ ಈ ಸ್ಮೃತಿಚಿತ್ರಗಳೊಂದಿಗೆ ಸಂಗ್ರಹಯೋಗ್ಯವಾದ, ಮಹತ್ವದ ಮಾಹಿತಿಗಳೂ ಈ ಕೃತಿಯಲ್ಲಿ ದಾಖಲಿಸಲ್ಪಟ್ಟಿವೆ. ಸ್ವಾಮಿ ಯತೀಶ್ವರಾನಂದಜಿಯವರ ಭಾಷಣಗಳು ಹಾಗೂ ಅವರ ವೇದಮಂತ್ರ-ಸ್ತೋತ್ರಪಠಣಗಳ ಧ್ವನಿಮುದ್ರಿಕೆಯನ್ನೊಳಗೊಂಡ ಸಿ.ಡಿ.ಯನ್ನೂ ಈ ಎರಡು ಸಂಪುಟಗಳ ಕೃತಿಯೊಂದಿಗೆ ನೀಡಿರುವುದು ಒಂದು ವಿಶೇಷವಾಗಿದೆ.

ಸ್ವಾಮಿ ರಾಮಕೃಷ್ಣಾನಂದರ ಜಯಂತಿ ಕಾರ್ಯಕ್ರಮಗಳ ಅಂಗವಾಗಿ ನಡೆದ ಈ ಗ್ರಂಥಬಿಡುಗಡೆ ಕಾರ್ಯಕ್ರಮದಲ್ಲಿ ವೇದ ಮಂತ್ರ, ಕೃತಿ ಪರಿಚಯ, ಸ್ವಾಮೀಜಿಯವರನ್ನು ಹತ್ತಿರದಿಂದ ಬಲ್ಲ ಭಕ್ತರಿಬ್ಬರ ಸ್ಮೃತಿಭಾಷಣ, ಕೃತಿಯ ಸಂಪಾದಕರಾದ ಸ್ವಾಮಿ ಆತ್ಮಶ್ರದ್ಧಾನಂದರಿಂದ ಪ್ರಾಸ್ತಾವಿಕ ಭಾಷಣ ನಡೆಯಿತು. ಬಳಿಕ ಚೆನ್ನೈ ರಾಮಕೃಷ್ಣ ಮಠದ ಅಧ್ಯಕ್ಷರಾದ ಸ್ವಾಮಿ ಗೌತಮಾನಂದಜಿಯವರು ಕೃತಿ ಬಿಡುಗಡೆ ಮಾಡಿ ಆಶೀರ್ವಚನ ನೀಡಿದರು. ಕಾರ್ಯಕ್ರಮದಲ್ಲಿ ಸುಮಾರು ೪೦೦ ಮಂದಿ ಭಾಗವಹಿಸಿದ್ದರು.

## ಮಂಗಳೂರಿನಲ್ಲಿ 'ಸ್ವಾಮಿ ವಿವೇಕಾನಂದ ರಾಷ್ಟ್ರೀಯ ಸಮ್ಮೇಳನ'






'ಸ್ವಾಮಿ ವಿವೇಕಾನಂದರ ೧೫೦ನೇ ಜನ್ಮಶತಮಾನೋತ್ಸವ'ದ ಆಚರಣೆಯ ಅಂಗವಾಗಿ ಮಂಗಳೂರು ರಾಮಕೃಷ್ಣ ಮಠವು ಆಯೋಜಿಸಿದ ಎರಡು ದಿನಗಳ ರಾಷ್ಟ್ರಮಟ್ಟದ **'ಸ್ವಾಮಿ ವಿವೇಕಾನಂದ ರಾಷ್ಟ್ರೀಯ ಸಮ್ಮೇಳನ'** ವು ಜುಲೈ ೧೧, ೧೨ ರಂದು ನಗರದ ಶ್ರೀಧರ್ಮಸ್ಥಳ ಮಂಜುನಾಥೇಶ್ವರ ಬಿಸಿನೆಸ್ ಮ್ಯಾನೇಜ್‌ಮೆಂಟ್ ಕಾಲೇಜಿನಲ್ಲಿ ನಡೆಯಿತು. ವಡೋದರಾ ದಲ್ಲಿರುವ ರಾಮಕೃಷ್ಣ ಮಿಷನ್ನಿನ ಕಾರ್ಯದರ್ಶಿಗಳಾದ ಸ್ವಾಮಿ ನಿಖಿಲೇಶ್ವರಾನಂದರು ಈ ಸಮ್ಮೇಳನವನ್ನು ಉದ್ಘಾಟಿಸಿದರು. ಆನಂತರ ಅವರು ಭಾಷಣ ಮಾಡಿ, ಸ್ವಾಮಿ ವಿವೇಕಾನಂದರ ಶಕ್ತಿ ಹೇಗೆ ದೇಶದೆಲ್ಲೆಡೆ ಕೆಲಸ ಮಾಡುತ್ತಿದೆ, ಅದನ್ನು ಕಾರ್ಯಗತಗೊಳಿಸುವಲ್ಲಿ ಹೇಗೆ ಔದಾಸೀನ್ಯವನ್ನು ಮೆಟ್ಟಿ ನಿಲ್ಲಬೇಕಾಗಿದೆ, ಹೇಗೆ ದೀರ್ಘಕಾಲಿಕವಾದ ಕಾರ್ಯಪ್ರಣಾಳಿಗಳನ್ನು ಹಾಕಿಕೊಳ್ಳಬೇಕು; ವ್ಯಕ್ತಿತ್ವದ ಬೆಳವಣಿಗೆಗೆ ಸತತ ಪರಿಶ್ರಮ ಅತ್ಯಗತ್ಯ – ಮೊದಲಾದ ವಿಚಾರಗಳನ್ನು ವಿವರಿಸಿದರು.

ವಿಶೇಷ ಅತಿಥಿಗಳಾಗಿ ಆಗಮಿಸಿದ ಎಸ್.ಡಿ.ಎಂ. ಸಿ.ಬಿ.ಎಂ. ನ ಹಳೆಯ ವಿದ್ಯಾರ್ಥಿ ಶ್ರೀ ವೆಂಕಟೇಶ ಬಾಳಿಗ ಅವರು ಪ್ರಸ್ತಾವಿಕ ಭಾಷಣ ಮಾಡಿ ಮಾತನಾಡಿ, ಆಧ್ಯಾತ್ಮಿಕ ಆನಂದದಿಂದಲೇ ನಿಜವಾದ ಏಳಿಗೆ ಉಂಟಾಗುವುದು ಎಂದರು.

ಸಂಯೋಜನಾ ಸಮಿತಿಯ ಅಧ್ಯಕ್ಷರಾದ ಶ್ರೀಮತಿ ಆರುಣ್.ಪಿ.ಕಾಮತ್ ಅತಿಥಿಗಳನ್ನು ಗೌರವಿಸಿದರು. ಸಂಚಾಲಕರಾದ ಶಾಲಿನಿ ನವೀನ್ ಸ್ವಾಗತ ಭಾಷಣ ಮಾಡಿದರು. ಮಂಗಳೂರು ರಾಮಕೃಷ್ಣ ಮಿಷನ್ನಿನ ಅಧ್ಯಕ್ಷರಾದ ಸ್ವಾಮಿ ಜಿತಕಾಮಾನಂದಜಿ, ಶ್ರೀ ಪದ್ಮನಾಭ ಮರಾಠೆ ಮೊದಲಾದ ಗಣ್ಯರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

Managing Editor : Swami Muktidananda Editor : Swami Jnanayogananda
Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# ಪ್ರವಾಸ 2014 ರೈಲು ಹಾಗೂ ಬಸ್ಸಿನಲ್ಲಿ

## ಹೋಟೆಲ್ ರೂಂ ಹಾಗೂ ನಮ್ಮ ಊಟೋಪಚಾರದೊಂದಿಗೆ

### ಕಾಶಿ - ನೇಪಾಳ (ಮುಕ್ತಿನಾಥ್) : 16 ದಿನಗಳು
Oct 05

ಕಾಶಿ, ಅಯೋಧ್ಯಾ, ಕಠ್ಮಂಡು, ಪೋಖ್ರಾ, ಮುಕ್ತಿನಾಥ್ (Optional), ಮನೋಕಾಮನ, ಘೋರಖ್‌ಪುರ್

### ಶಕ್ತಿಪೀಠಗಳು ಮತ್ತು ಸಿಮ್ಲಾ ಮನಾಲಿ ಸ್ಪೆಷಲ್ : 20 ದಿನಗಳು
Sep 01, Oct 02

ಚಂಡೀಘರ್, ಸಿಮ್ಲಾ, ಕುಫ್ರಿ, ಕುಲು ಮನಾಲಿ, ರೋತಾಂಗ್ ಪಾಸ್ (Optional), ವಶಿಷ್ಠ, ಬೈಜ್‌ನಾಥ್, ಚಾಮುಂಡ, ನೈನಾದೇವಿ, ಖಾಂಗ್ರಾ, ಚಿಂತಪೂರ್ಣಿ, ಜ್ವಾಲಾಮುಖಿ, ಧರ್ಮಶಾಲಾ, ವೈಷ್ಣವೀದೇವಿ, ವಾಘಾ ಬಾರ್ಡರ್ (ಇಂಡೋ-ಪಾಕ್ ಬಾರ್ಡರ್), ಅಮೃತ್‌ಸರ್, ಕುರುಕ್ಷೇತ್ರ, ಶಾಕಂಬರಿ, ಹರಿದ್ವಾರ, ನವದೆಹಲಿ

### ಕೋಲ್ಕತ್ತಾ - ಡಾರ್ಜಿಲಿಂಗ್ - ಪೂರಿ : 16 ದಿನಗಳು
Oct 27, Nov 08

ಡಾರ್ಜಿಲಿಂಗ್, ಗ್ಯಾಂಗ್‌ಟಕ್, ಸಿಲಿಗುರಿ, ಕೋಲ್ಕತ್ತಾ, ಪೂರಿ, ಕೊನಾರ್ಕ್, ಚಿಲ್ಕ ಲೇಕ್, ಭುವನೇಶ್ವರ್

### ಕಾಶಿ - ಗಯಾ - ಪ್ರಯಾಗ್ : 12 ದಿನಗಳು
Oct 27, Nov 06

ಅಲಹಾಬಾದ್, ಗಯಾ, ಬುದ್ಧಗಯಾ, ಕಾಶಿ, ಸಾರಾನಾಥ್, ಅಯೋಧ್ಯಾ

### ದ್ವಾರಕ ಮತ್ತು ಅಷ್ಟ ಜ್ಯೋತಿರ್ಲಿಂಗ : 24 ದಿನಗಳು
Oct 27, Nov 17

ಪುಷ್ಕರ, ನಾಥದ್ವಾರ, ಕಾಂಕ್ರೋಲಿ, ಏಕಲಿಂಗ್ಜಿ, ಉದಯಪುರ, ಮೌಂಟ್ ಅಬು, ಮಾತೃಗಯಾ, ಶಿರಡಿ, ದ್ವಾರಕ, ಬೇಟ್‌ದ್ವಾರಕ, ನಾಗೇಶಂ, ಮೂಲ ದ್ವಾರಕ, ಪೋರಬಂದರ್, ವಿರಾವಲ್, ಸೋಮನಾಥ್, ಡಾಕೋರ್, ಅಹಮದಾಬಾದ್, ಉಜ್ಜೈನಿ, ಓಂಕಾರೇಶ್ವರ, ಪರ್ಲಿ, ಔರಂಗಾಬಾದ್, ಘೃಷ್ಣೇಶ್ವರ, ನಾಸಿಕ್, ತ್ರಿಯಂಬಕ್, ಶಿರಡಿ, ಶನಿಸಿಂಗನಾಪುರ, ಭೀಮಾಶಂಕರ್

### ದಕ್ಷಿಣ ಭಾರತ : 10 ದಿನಗಳು
Nov 24

ಗುರುವಾಯೂರ್, ಕಾಲಡಿ, ತಿರುವನಂತಪುರ, ಸುಚೀಂದ್ರಂ, ಕೋವಲಂ ಬೀಚ್, ಕನ್ಯಾಕುಮಾರಿ, ರಾಮೇಶ್ವರಂ, ಮಧುರೈ, ತಿರುಚಿ, ಶ್ರೀರಂಗಂ, ತಂಜಾವೂರ್, ಕುಂಭಕೋಣಂ, ಚಿದಂಬರಂ, ತಿರುವಣ್ಣಾಮಲೈ, ನವಗ್ರಹ ದೇವಸ್ಥಾನಗಳು

### ಅಷ್ಟವಿನಾಯಕ - ಶಿರಡಿ : 08 ದಿನಗಳು
Dec 15



## ಶ್ರೀ ಹನ್ಸಾ ಟ್ರಾವೆಲ್ಸ್
## SHRI HANSAA TRAVELS

**RECOGNISED BY DEPARTMENT OF TOURISM, GOVT. OF KARNATAKA**

No. 640, 40th Cross (Near Prabha Eye Clinic), 8th Block, Jayanagar, Bangalore - 560 070.
☎: (080) 26543891 / 26643276 Mobile : (0) 9341415612 / 9341215612
e-mail : hansaatravels@gmail.com web : www.hansaatravels.com

VIVEKA PRABHA (KANNADA MONTHLY)
September 2014, Vol.15, No.09, No. of pages : 44

Registered With Registrar of News Papers Of India under 72356/2000.postal Regn.No.KA/SK/MYS/480/ 2012-14. LICENCED TO POST W.P.P.AT YADAVAGIRI MYSORE 570 020,VIDE LICENCE NO.SK/WPP/MYS/155/2013-15



Printed at mayur graphics,Bangalore